# ತ್ಯಾಗ

ಕುಮುದ



ಪ್ರಕಾಶಕರು :

ಜಿ. ಗುಂಡಣ್ಣ, ಎಂ.ಎ.

ಕನ್ನಡ ಅಧ್ಯಾಪಕರು

ಮೈಸೂರು ವಿಶ್ವವಿದ್ಯಾನಿಲಯ

ಇಂಟರ್ ಮಿಡಿಯೇಟ್ ಕಾಲೇಜು, ಮಂಡ್ಯ

ಮೊದಲ ಮುದ್ರಣ: ೧೯೫೪
೧೦೦೦ ಪ್ರತಿಗಳು

ಬೆಲೆ: ಕ್ಯಾಲಿಕೋ ೨—೦—೦. ಸಾದಾ ಪ್ರತಿ ೧—೪—

ಮುದ್ರಕರು:
ಡಿ. ರಾಜರತ್ನಂ, ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್,
ಮೈಸೂರು

# ಅರಿಕೆ

ಈ ನನ್ನ ಪ್ರಥಮ ಕಾದಂಬರಿಯು ಜನ್ಮತಾಳಿ ಕೆಲವು ವರ್ಷಗಳಾದುವು. ಅಂದು ಜನಿಸಿದ ಕೂಸಿಗೆ ಶುಚಿಸಂಸ್ಕಾರಗಳು ನಡೆಯಲು ಇಷ್ಟು ಕಾಲ ತೆಗೆದುಕೊಂಡಿತು. ನಾನು ಇನ್ನೂ ಒಬ್ಬ ಬರಹಗಾರನೆಂಬ ಬಿರುದಿಗೆ ಪಾತ್ರನಾಗಿಲ್ಲವಾದರೂ 'ಪ್ರಬುದ್ಧ ಕರ್ಣಾಟಕ'ದಲ್ಲೂ ಹಾಗೆಯೇ, 'ಒಕ್ಕಲಿಗರ ಪತ್ರಿಕೆಯಲ್ಲೂ' ಅನೇಕ ದಿನಗಳ ಹಿಂದೆ ಪ್ರಕಟವಾದ ನನ್ನ ಹಲವಾರು ಕವನಗಳನ್ನು ಓದಿದ ಪರಿಚಿತ ಮತ್ತು ಅಪರಿಚಿತ ಸ್ನೇಹಿತರನೇಕರು "ತಮ್ಮದು ಯಾವ ಪುಸ್ತಕವೂ ಇನ್ನೂ ಪ್ರಕಟವಾಗಿಲ್ಲವೆ?" ಎಂದು ಅನೇಕಬಾರಿ ಕೇಳಿ ಕೇಳಿ ನನಗೆ ಅವ್ಯಕ್ತರೂಪವಾದ ಧೈರ್ಯಪ್ರೋತ್ಸಾಹಗಳನ್ನು ಕೊಟ್ಟಿದ್ದಾರೆ. ಆ ಸಹೃದಯರಿಗೆ ನಾನು ಕೃತಜ್ಞನಾಗಿದ್ದೇನೆ. ಆ ಧೈರ್ಯಪ್ರೋತ್ಸಾಹಗಳ ಪ್ರೇರಣೆಯಿಂದಲೂ ಮತ್ತು ನನ್ನ ಆತ್ಮಾಭಿಲಾಷೆಗಾಗಿಯೂ ಈ ನನ್ನ ಪುಟ್ಟ ಕಾದಂಬರಿಯೊಂದನ್ನು ಪ್ರಪ್ರಥಮವಾಗಿ ಕನ್ನಡಜನತೆಯ ಮುಂದಿಡುತ್ತಿದ್ದೇನೆ.

ಆದಿಕವಿ ವಾಲ್ಮೀಕಿಯು ರಚಿಸಿದ ಶ್ರೀ ರಾಮಾಯಣ ಮಹಾಕಾವ್ಯದ ಕಾಲದಿಂದಲೂ 'ಪ್ರೇಮ'ವೆಂಬ ವಿಷಯವು ಎಲ್ಲ ರೀತಿಯ ಕಾವ್ಯ, ಕಾದಂಬರಿ, ಕಥೆ, ಕವನಗಳ ವಸ್ತುವಾಗಿ ಚಿರಂತನವಾಗಿ ಉಳಿದು ಬರುತ್ತಿದೆ. ಅದರಲ್ಲಿ ದಿವ್ಯಪ್ರೇಮದ ಸ್ವರೂಪವೆಂಥದೆಂಬುದನ್ನು ಅಧಿಕಾರವಾಣಿಯಿಂದ ಹೇಳುವಂಥಾ ಯೋಗ್ಯತೆ ನನಗಿನ್ನೂ ಬಂದಿಲ್ಲವೆಂದು ತಿಳಿದಿದ್ದೇನೆ. ಹಿರಿಯರೂ ಅನುಭವಿಗಳೂ ಜ್ಞಾನಿಗಳೂ

ಆದವರು ಅದನ್ನು ತಿಳಿಸಲು ಯೋಗ್ಯರು. ಆದರೆ ನಾನು ಒಬ್ಬ ಕವಿಶಿಷ್ಯನೆಂದು ಮಾತ್ರ ಕರೆದುಕೊಳ್ಳಬಲ್ಲೆ. ಪಾಶ್ಚಾತ್ಯ ಪೌರ್ವಾತ್ಯ ಕವಿಗಳ ಮತ್ತು ದಾರ್ಶನಿಕರ ಮತ್ತು ಪ್ರತ್ಯಕ್ಷ ಪರೋಕ್ಷ ಗುರುವರ್ಯರ ಪ್ರಭಾವದಿಂದ ಜನ್ಮಾಂತರದಿಂದ ನನ್ನಲ್ಲಿ ಉಳಿದು ಬಂದ ಪ್ರೇಮಬಿಂದುವೊಂದು ಇಂತಹ ಪರಿಣಾಮವನ್ನು ಹೊಂದಿ ಈ ರೂಪವಾಗಿ ಅರಳಿ ಈ 'ತ್ಯಾಗ'ವೆಂಬ ಕೃತಿಯಾಗಿ ಮೂಡಿದೆ. ಈ ನನ್ನ ಪುಟ್ಟ ಕೃತಿಯನ್ನು ಇಷ್ಟು ಮುದ್ದಾಗಿ, ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ ಮಾಲೀಕರವರಿಗೆ ನನ್ನ ಕೃತಜ್ಞತೆಗಳನ್ನರ್ಪಿಸುತ್ತೇನೆ.

ತಾ॥ ೩—೧—೧೯೫೫,
ಮಂಡ್ಯ.

ಜಿ. ಗುಂಡಣ್ಣ.

# ಸ ಮ ರ್ಪ ಣೆ



ಜ್ಯೋತಿರ್ಮೂರ್ತಿಯೂ

ನನ್ನ

ಮಾತೃಸ್ವರೂಪಿಣಿಯೂ

ಆದ

ನನ್ನ ದಿವಂಗತ ಹಿರಿಯ

ಸಹೋದರಿಯ

ಆತ್ಮಕ್ಕೆ.

# ವಿಷಯಾನುಕ್ರಮಣಿಕೆ







ಜಗದ ಬಂದೀಗೃಹದಿ ಬಿಗಿಯುತಿರೆ ವಿಧಿ ನಿನ್ನ ।
ನಿಗಮ ಸತ್ಕಲೆ ಕಾವ್ಯಗಳ ಗವಾಕ್ಷಗಳಿಂ ॥
ಗಗನದೊಳನಂತದರ್ಶನದೆ ಮುಕ್ತಿಯನೊಂದು ।
ನಗುನಗಿಸಿ ಲೋಕವನು—ಮಂಕುತಿಮ್ಮ ॥

——ಡಿ. ವಿ. ಜಿ.

# ತ್ಯಾಗ

## ಮೊದಲನೆಯ ದಳ

### ವಿಧಿಯ ಜಾಲ

ಎಲ್ಲಿಯದನ್ ಅದೆಲ್ಲಿಯಾಪಕೋ ಹೆಣೆಯುವನು ।

*　　　*　　　*

ಸೌಂದರ್ಯ ಬಾಂಧವ್ಯಗಳನು ಬರಿದೆನಲಹುದೆ ? ।
ಹೊಂದಿಸವೆ ಕುಂದಿಸವೆ ಜೀವಿಗಳನವುಗಳ್ ? ॥
ಸಿಂಧುಪೂರದಿ ಬಿದ್ದವರೊಳೊಬ್ಬರೊಬ್ಬರನು ।
ಅಂದಿಕೊಳಲಮ ಬರಿದೆ ?— ಮಂಕುತಿಮ್ಮ ॥

—ಡಿ.ವಿ.ಜಿ.

ಅನಂತಪುರದ ನೈರುತ್ಯಕ್ಕೆ ಉತ್ತರ ಪಿನಾಕಿನಿ ನದಿಯ ಪೂರ್ವಕ್ಕೆ ಗೌರೀಹಳ್ಳಿ ಎಂಬ ಒಂದು ಸಣ್ಣ ಊರು. ಅದರ ಪಕ್ಕದಲ್ಲಿ ಶಂಭುಗಿರಿ ಎಂಬ ಒಂದು ಸಣ್ಣ ಬೆಟ್ಟ. ಆ ಬೆಟ್ಟದ ನೆತ್ತಿಯಲ್ಲಿ ಕಲ್ಯಾಣೇಶ್ವರನೆಂದು ಹೆಸರುಳ್ಳ ಶಿವನ ದೇವಾಲಯವಿದೆ. ಆ ದೇವಾಲಯದ ಬಲಕ್ಕೆ ಸ್ವಲ್ಪ ಕೆಳಗಡೆಯಲ್ಲಿ ಒಂದು ತಣ್ಣೀರು ಹೊಂಡವಿದೆ. ಅದನ್ನು ಕಲ್ಯಾಣತೀರ್ಥವೆಂದು ಕರೆಯುತ್ತಾರೆ. ಅದರ ನೀರು ಬೇಸಗೆಯಲ್ಲೂ ಬತ್ತುವುದಿಲ್ಲ. ಇಷ್ಟು ಮಾತ್ರ ಪ್ರಕೃತಿಯ ಆವರಣವನ್ನು ಹೊಂದಿರುವ ಗೌರೀಹಳ್ಳಿಯು ಸುಮಾರು ನೂರು ಮನೆಯ ಗ್ರಾಮ. ಆ ಊರಿಗೆಲ್ಲಾ ಏಳೆಂಟು ಮನೆಯವರು ಮಾತ್ರ ಸ್ವಲ್ಪ ಅನುಕೂಲಸ್ಥರು. ಉಳಿದವರು ಬಡವರು. ಅನುಕೂಲಸ್ಥ

ರಲ್ಲಿ ಒಬ್ಬರಾದ ರತ್ನಯ್ಯನೆಂಬವರು ಅಲ್ಲಿಯ ಸುತ್ತಮುತ್ತಣ ಹಳ್ಳಿಗಳಿಗೆಲ್ಲಾ ಪ್ರಸಿದ್ಧರು. ಹಳ್ಳಿಗಳಲ್ಲಿರುವ ಅನೇಕ ಶ್ರೀಮಂತರು ಬಡವರನ್ನು ಶೋಷಣೆ ಮಾಡಿ ಐಶ್ವರ್ಯವಂತ ರಾಗಿದ್ದರೆ ರತ್ನಯ್ಯನವರು ಧರ್ಮಿಷ್ಠರಾಗಿಯೇ ಶ್ರೀಮಂತ ರಾದರು. ಅದಕ್ಕೆ ಕಾರಣ ವ್ಯವಸಾಯದಲ್ಲಿದ್ದ ಅವರ ಜಾಣ್ಮೆ, ಜನಗಳಲ್ಲಿದ್ದ ಅವರ ವಿಶ್ವಾಸ ಮತ್ತು ಬಡವರಲ್ಲಿದ್ದ ಅವರ ಹಾರ್ದ್ರಹೃದಯ. ಅವರು ಶ್ರೀಮಂತರೆಂದರೆ ಲಕ್ಷಾಧೀಶರಲ್ಲ. ಆ ನಾಡಿಗೆ ತಕ್ಕಂತೆ ಹತ್ತು ಎಕರೆ ತರೀಗದ್ದೆ, ಎರಡು ಎಕರೆ ತೋಟ, ಅಷ್ಟು ಇಷ್ಟು ಲೇವಾದೇವಿ, ಮತ್ತು ಕೈಲಿ ಸ್ವಲ್ಪ ಹಣ—ಇಷ್ಟೇ ಅವರ ಐಶ್ವರ್ಯ. ಹಣದಿಂದಲ್ಲ ಅವರ ಹೆಸರು ಗೌರವಕ್ಕೆ ಬಂದುದು ; ಗುಣದಿಂದ. ಜನ್ಮತಹ ಸತ್ಪುರುಷರಾದ ಅವರಿಗೆ ಎರಡನೆಯ ಸೀತಾದೇವಿಯೆಂಬಂತಹ ಧರ್ಮಪತ್ನಿ ದೊರಕಿದ್ದರು. ಅವರೇ ಆ ಊರಿನ ಬಡವ ಬಲ್ಲಿದರೆಲ್ಲರಿಗೂ ಪೂಜ್ಯರಾಗಿದ್ದ ಗೌರಮ್ಮನವರು.

ರತ್ನಯ್ಯಗೌರಮ್ಮನವರಿಗೆ ಬಹುಕಾಲ ಮಕ್ಕಳಾಗಲಿಲ್ಲ. ಗೌರಮ್ಮನವರಿಗೆ ಅದೊಂದು ದೊಡ್ಡ ಕೊರತೆಯು ಮನ ಮರುಗಿಸುತ್ತಿತ್ತು. ಪತ್ನಿಯಲ್ಲಿ ಪರಮಪ್ರೇಮವನ್ನಿಟ್ಟಿದ್ದ ರತ್ನಯ್ಯನವರು ತಮಗೆ ತಿಳಿದ ದೇವರುಗಳಿಗೆಲ್ಲಾ ಪೂಜೆ ಮಾಡಿಸಿಕೊಂಡು ಬಂದರು. ಬಡಬಗ್ಗರಿಗೆ ಅನ್ನ ಹಾಕಿಸಿದರು. ಸತ್ಯನಾರಾಯಣನ ವ್ರತ ಮಾಡಿಸಿದರು. ಇನ್ನೂ ಏನೇನೋ ಶಾಸ್ತ್ರದಲ್ಲಿ ಹೇಳಿದುದನ್ನೆಲ್ಲಾ ಮಾಡಿಸಿದರು. ಕೊನೆಗೆ ದೇವರು ಆ ಆದರ್ಶ ದಂಪತಿಗಳ ಪ್ರಾರ್ಥನೆಗೆ ಓಗೊಟ್ಟನು. ಪತಿಗೆ ನಲವತ್ತು ವರ್ಷಗಳೂ ಪತ್ನಿಗೆ ಮೂವತ್ತು ವರ್ಷಗಳೂ ತುಂಬುತ್ತಿರುವಾಗ ಅವರಿಗೆ ಒಂದು

ಗಂಡು ಕೂಸಾಯಿತು. ಆ ಮಗುವು ತಾಯಿತಂದೆಗಳ ರೂಪು ತೇಜಸ್ಸುಗಳನ್ನು ಪಡೆದು ಚಂದ್ರನಂತೆ ಹೊಳೆಯು ತ್ತಿದ್ದುದರಿಂದ ಚಂದ್ರಣ್ಣನೆಂದೇ ನಾಮಕರಣ ಮಾಡಿದರು. ಪುತ್ರಜನನದಿಂದ ಆ ತಂದೆತಾಯಿಗಳಿಗಾದ ಸಂತೋಷವನ್ನು ಯಾರೂ ಬಣ್ಣಿಸಲಾರರು. ನಾಮಕರಣದ ಉತ್ಸವವನ್ನೇ ಒಂದು ದೊಡ್ಡ ಹಬ್ಬವನ್ನಾಗಿ ಆಚರಿಸಿ ಊರಿಗೆಲ್ಲಾ ಅನ್ನ ಹಾಕಿಸಿದರು. ಬಡಬಗ್ಗರಿಗೆ ವಸ್ತ್ರದಾನವೂ ನಡೆಯಿತು.

ಆ ಮಾತಾಪಿತೃಗಳ ಸಂತೋಷವು ಐದು ವರ್ಷಗಳ ಕಾಲ ನಿರಂತರವಾಗಿ ನಿರಾತಂಕವಾಗಿ ಬೆಳೆಯುತ್ತಿತ್ತು. ಆದರೆ ಮುದ್ದು ಮಗನಿಗೆ ಐದು ವರ್ಷಗಳಾಗುತ್ತಲೇ ರತ್ನಯ್ಯನವರಿಗೆ ಸಖತ್ ಖಾಯಿಲೆಯಾಗಿಬಿಟ್ಟಿತು. ಏನು ಮಾಡಿದರೂ ವಾಸಿಯಾಗುವಂತೆ ಕಾಣಬರಲಿಲ್ಲ. ಕೊನೆಗೂ ಒಂದು ದಿನ ಪರಂಧಾಮವನ್ನೈದಿದರು. ಸಾಯುವ ಮುನ್ನ ತಮ್ಮ ಪಕ್ಕ ದಲ್ಲಿ ಮೂಕಶೋಕದಲ್ಲಿ ಮುಳುಗಿ ಗೋಳಿಡುತ್ತಿದ್ದ ಗೌರಮ್ಮ ನನ್ನು ಉದ್ದೇಶಿಸಿ, "ಗೌರಾ, ದುಃಖಪಡಬೇಡ. ಶಾಂತಿ ಯನ್ನು ತಂದುಕೋ. ಲೋಕದ ರೀತಿಯು ನಿನಗೆ ತಿಳಿಯ ದುದೇ? ಎಲ್ಲರೂ ಎಂದಿದ್ದರೂ ಒಂದು ದಿನ ಎಲ್ಲವನ್ನೂ ತೊರೆದು ಮರಣವನ್ನಪ್ಪಲೇ ಬೇಕಲ್ಲವೆ? ಆದರೆ ಮನುಷ್ಯ ನಾದವನು ಸಾಯುವ ಮುನ್ನ ಸಜ್ಜನನೆನ್ನಿಸಿಕೊಳ್ಳಬೇಕಷ್ಟೇ? ಗುಣಕ್ಕಿಂತ ಮಿಗಿಲಾದ ಐಶ್ವರ್ಯ ಈ ಜಗತ್ತಿನಲ್ಲಿಲ್ಲ ಗೌರಾ. ಹಾಗೆಯೇ ನಾನೂ ನಾಲ್ಕು ಜನರ ಬಾಯಲ್ಲಿ ಒಳ್ಳೆಯವ ನೆನ್ನಿಸಿಕೊಂಡು ಬಾಳಿದೆ. ನನ್ನ ಕೈಲಾದ ದೀನಸೇವೆಯನ್ನು ಮಾಡಿದ್ದೇನೆ. ಗೌರಾ, ನನ್ನಂತೆಯೇ ನೀನೂ ಗೌರವವಾಗಿ ಬಾಳಿ ಈ ಊರಿಗೆ ಪೂಜ್ಯಳೆನಿಸಿಕೊಂಡು ಕೀರ್ತಿಯನ್ನು

ಪಡೆ. ನಮ್ಮ ಕಂದನನ್ನು ಬಹು ಚೆನ್ನಾಗಿ ಸಾಕು. ವಿದ್ಯಾ ಬುದ್ಧಿಯನ್ನು ಮಾತ್ರ ನಮ್ಮ ಕಂದನಿಗೆ ದೊಡ್ಡದಾಗಿ ಕಲಿಸ ಬೇಕೆಂಬುದು ನನ್ನ ಆಸೆಯಾಗಿತ್ತು. ಈಗ ನೀನು ಅಬಲೆ. ಪರಸ್ಥಳಕ್ಕೆ ಮಗನನ್ನು ಕಳಿಸಲು ಹೆದರಿ ಓದುವುದನ್ನೇ ನಿಲ್ಲಿಸಿಬಿಡುವ ಸಂಭವವುಂಟು. ಆದರೂ ಗೌರಾ, ನೀನು ಅಧೈರ್ಯಪಡದೆ ನಮ್ಮ ಕಂದನಿಗೆ ಪದವೀಧರನಾಗುವ ವರೆಗೂ ಓದಿಸಬೇಕೆಂಬುದೇ ನನ್ನ ಇಷ್ಟ. ನನ್ನ ಇದೊಂದು ಬೇಡಿಕೆಯನ್ನು ಪೂರ್ತಿಮಾಡಿದರೆ ನನ್ನಾತ್ಮಕ್ಕೆ ತೃಪ್ತಿಯಾಗು ತ್ತದೆ. ಈ ಹಳ್ಳಿಗಾಡಿನಲ್ಲಿ ವಿದ್ಯೆಯ ಹೆಸರೇ ಇಲ್ಲ. ವಿದ್ಯಾ ಬುದ್ಧಿಯಿಲ್ಲದೆ ಬೆಳಕಿಲ್ಲ. ಅದುದರಿಂದ ನನ್ನ ಬಯಕೆಯನ್ನು ನೀನು ನೆರವೇರಿಸಬೇಕೆಂದು ಕೇಳುತ್ತೇನೆ." ಎಂದು ಮುಂತಾಗಿ ಬುದ್ಧಿವಾದಗಳನ್ನು ಹೇಳಿದ್ದರು.

ರತ್ನಯ್ಯನವರು ಮುಂದೆ ತಮಗೂ ತಮ್ಮ ತಮ್ಮನಾದ ಚನ್ನಯ್ಯನಿಗೂ ಆಗುತ್ತವೆ ಎಂದು ಊರಿನ ಉತ್ತರದಿಕ್ಕಿನಲ್ಲಿ ವಿಶಾಲವಾದ ಬಯಲಿನಲ್ಲಿ ಎರಡು ಮನೆಗಳನ್ನು ಜೋಡಿ ಯಾಗಿ ಕಟ್ಟಿಸಿದ್ದರು. ಮನೆಗಳು ಎರಡಾದರೂ ಮುಂದಿನ ಜಗಲಿ ಚಪ್ಪರಗಳು ಎರಡಕ್ಕೂ ಒಂದೇ ಆಗಿದ್ದುವು. ತರ್ನ ಯ್ಯನವರು ತೀರಿಕೊಂಡ ನಂತರ ಇಡೀ ಮನೆಯಲ್ಲಿ ಗೌರಮ್ಮ ಗೌರಮ್ಮನ ಕಂದ ಚಂದ್ರ, ರತ್ನಯ್ಯನ ತಮ್ಮ ಚಿನ್ನಯ್ಯ ಮತ್ತು ಇಬ್ಬರು ಆಳುಗಳು—ಇಷ್ಟು ಮಂದಿಯಿದ್ದರು. ಗೌರಮ್ಮನವರು ತಮಗಾದ ದುಃಖವನ್ನು ನುಂಗಿಕೊಂಡು ಮನೆಗೆಲ್ಲಾ ಯಜಮಾನಿಯಾಗಿ ನಿಂತರು. ಬಹಳ ಮುಗ್ಧ ಸ್ವಭಾವದವನೂ ಅಣ್ಣನಲ್ಲಿ ಪಿತೃಭಕ್ತಿಯನ್ನಿಟ್ಟಿದ್ದವನೂ ಆದ ಚಿನ್ನಯ್ಯನು ಹಗಲಿರುಳೂ ಕಪಿಲೆ, ತೋಟ, ಗದ್ದೆ, ಹೊಲ

ಗಳ ಕಡೆ ಮುತವರ್ಜಿಯಿಂದ ನಿಂತನು. ರತ್ನಯ್ಯನವರಿಗಿಂತ ಹತ್ತುವರ್ಷಗಳಿಗೆ ಚಿಕ್ಕವನೂ ಗೌರಮ್ಮನವರ ಸಮವಯಸ್ಕನೂ ಆಗಿದ್ದ ಚಿನ್ನಯ್ಯನು ಅಣ್ಣನೆದುರು ಎಂದೂ ತಲೆಯೆತ್ತಿ ಸಹ ಮಾತಾಡಿದವನಲ್ಲ. ಅತ್ತಿಗೆಯ ಮುಂದೆಯೂ ಅಷ್ಟೆ. ಆದುದರಿಂದ ಇನ್ನೂ ಅವಿವಾಹಿತನಾಗಿದ್ದರೂ ಅಣ್ಣನು ತೀರಿಕೊಂಡ ನಂತರ ಎರಡು ವರ್ಷಗಳಾದರೂ ತನ್ನ ಮದುವೆಯ ಸುದ್ದಿಯನ್ನೂ ಎತ್ತದೆ ಕೆಲಸ ಕಾರ್ಯಗಳಲ್ಲಿ ನಿರತನಾಗಿಬಿಟ್ಟನು. ಆದರೆ ತಿಳಿದವರಾದ ಗೌರಮ್ಮನವರು ತಾವೇ ಮುಂದೆ ನಿಂತು ಚಿನ್ನಯ್ಯನಿಗೆ ಮದುವೆ ಮಾಡಿದರು. ತಮ್ಮ ತೌರೂರಾದ ಕಲ್ಯಾಣದುರ್ಗದಲ್ಲಿ ತಮ್ಮ ತೌರುಮನೆಯಲ್ಲೇ ಹೆಣ್ಣನ್ನು ಆರಿಸಿದರು. ಆ ಹೆಣ್ಣಿನ ಹೆಸರು ಗಂಗಮ್ಮ. ಚಿನ್ನಯ್ಯನ ಸ್ವಭಾವಕ್ಕೆ ತಕ್ಕ ಹೆಣ್ಣು. ಗುಣದ ಸೌರಭದಿಂದ ತುಂಬಿ ತುಳುಕಿದರೂ ಜನರ ಕಣ್ಣಿಗೆ ಬೀಳದಂಥ ವನಸುಮದಂತೆ ಇತ್ತು ಗಂಗಮ್ಮನ ವ್ಯಕ್ತಿತ್ವ. ಆದರೆ ಈ ನೂತನ ದಂಪತಿಗಳಿಗೆ ರತ್ನಯ್ಯ ಗೌರಮ್ಮನವರಿಗಾದಂತೆಯೇ ಬಹುಕಾಲ ಎಂದರೆ ಮದುವೆಯಾಗಿ ಐದು ವರ್ಷಗಳಾದರೂ ಮಕ್ಕಳಾಗಲಿಲ್ಲ. ಕೊನೆಗೆ ಚಂದ್ರನಿಗೆ ಹನ್ನೆರಡು ವರ್ಷಗಳು ತುಂಬುತ್ತಿರುವಾಗ ಚಿನ್ನಯ್ಯನಿಗೆ ಒಂದು ಹೆಣ್ಣು ಮಗುವಾಯಿತು. ಆ ಮಗುವಿಗೆ ಶಾರದೆಯೆಂದು ಹೆಸರಿಟ್ಟರು.

ಆ ವರ್ಷವೇ ಶ್ಯಾಮಯ್ಯನವರೆಂಬ ಒಬ್ಬ ಉಪಾಧ್ಯಾಯರು ಗೌರೀಹಳ್ಳಿಗೆ ಬಂದರು. ಅವರು ಚಂದ್ರನ ಜಾತಿಯವರೇ ಆಗಿದ್ದರೂ ಪೂರ್ತಿಯಾಗಿ ಹೊಸಬರಾಗಿದ್ದರು. ಅವರು ಧರ್ಮಾವರದ ಕಡೆಯ ಒಂದು ಹಳ್ಳಿಯವರು. ಬಹಳ

ಬಡವರು. ಕೆಲವು ಕಾಲ ಸರ್ಕಾರಿ ಸ್ಕೂಲಿನಲ್ಲಿ ಉಪಾಧ್ಯಾಯ ವೃತ್ತಿಯಲ್ಲಿದ್ದವರು. ಮಧ್ಯದಲ್ಲಿ ಅವರ ಹೆಂಡತಿ ತೀರಿ ಕೊಂಡರು. ಆಗ ಅವರಿಗೆ ಕೇವಲ ಒಂದು ವರುಷದ ಲಲಿತೆ ಯೆಂಬ ಮುದ್ದು ಮಗಳಿದ್ದಳು. ಹೆಂಡತಿ ತೀರಿದ ಮೇಲೆ ಶ್ಯಾಮಯ್ಯನವರಿಗೆ ಊರೂರು ತಿರುಗುವ ಸರ್ಕಾರಿ ಕೆಲಸ ಬೇಕಿಲ್ಲವಾಯಿತು. ಅಲ್ಲದೆ ತಮಗಿದ್ದ ಏಕಮಾತ್ರ ಪುತ್ರಿಯ ಭವಿಷ್ಯ ಸುಖಕ್ಕಾಗಿ ಎಲ್ಲಿಯಾದರೂ ಎರಡೆಕರೆ ಸ್ಥಿರಾಸ್ತಿ ಯನ್ನು ಮಾಡಿಕೊಂಡು ಊರಿನ ಹುಡುಗರಿಗೆ ಇದ್ದಲ್ಲಿಯೇ ರಾತ್ರಿ ಪಾಠವನ್ನು ಹೇಳಿಕೊಂಡು ಎಲ್ಲಿಯೂ ಕದಲದೆ ಮಗ ಳನ್ನು ಸಾಕುತ್ತಾ ಇದ್ದುಬಿಡಬೇಕೆಂದು ಮನಸ್ಸು ಮಾಡಿ ದರು. ಅವರು ಈ ನಿರ್ಧಾರವನ್ನು ಮಾಡುವುದರೊಳಗೆ ನಾಲ್ಕು ವರ್ಷಗಳು ಕಳೆದುಹೋದುವು. ಇನ್ನು ಅವರಿಗೆ ಚಿಕ್ಕ ಮಗುವಿನೊಡನೆ ಊರೂರು ಅಲೆಯುವುದು ಸಾಕಾಗಿ ಹೋಯಿತು. ಕೊನೆಗೆ ಲಲಿತೆಗೆ ಐದು ವರ್ಷಗಳು ನಡೆಯು ತ್ತಿರುವಾಗ ತಮ್ಮ ಉಪಾಧ್ಯಾಯವೃತ್ತಿಗೆ ರಾಜೀನಾಮೆ ಯಿತ್ತು ರತ್ನಯ್ಯಗೌರಮ್ಮನವರ ಕೀರ್ತಿಯನ್ನು ಕೇಳಿ ಅರಿತು ಕೊಂಡು ಗೌರೀಹಳ್ಳಿಗೆ ಬಂದು ಸೇರಿದರು. ಗೌರಮ್ಮನವರು ಶ್ಯಾಮಯ್ಯನ ಬೇಡಿಕೆಯಂತೆ ತಮ್ಮ ಜೋಡಿ ಮನೆಗಳಲ್ಲಿ ಖಾಲಿಯಿದ್ದ ಒಂದು ಮನೆಯನ್ನು ಆತನಿಗೆ ವಾಸಿಸಲು ಕೊಟ್ಟರು. ತನ್ನ ಐದು ವರ್ಷದ ಮುದ್ದು ಮಗಳೊಂದಿಗೆ ಆ ಮನೆಯಲ್ಲಿ ಶ್ಯಾಮಯ್ಯನು ನೆಲಸಿದನು.

ಗೌರೀಹಳ್ಳಿಯಲ್ಲಿ ಆಗ ಪ್ರಾಥಮಿಕ ಪಾಠಶಾಲೆಯೂ ಇರಲಿಲ್ಲ. ಮುಂದೆ ಬೇಗ ಬರುವಂತೆಯೂ ಇರಲಿಲ್ಲ. ಆದುದ ರಿಂದ ಗೌರಮ್ಮನವರ ಆಶಯದಂತೆ ಶ್ಯಾಮಯ್ಯನವರು

ಒಂದು ಕೂಲಿಮಠವನ್ನು ತಮ್ಮ ಮನೆಯಲ್ಲೇ ಸ್ಥಾಪಿಸಿ ಮೊದಲು ಹತ್ತಾರು ಮಕ್ಕಳಿಗೆ ಪಾಠಪ್ರವಚನಗಳನ್ನು ಪ್ರಾರಂಭಿಸಿದರು. ಶ್ಯಾಮಯ್ಯನವರಿಗೆ ತಕ್ಕಮಟ್ಟಿನ ಸಂಪಾದನೆಯು ಧಾನ್ಯದ ರೂಪದಲ್ಲಿಯೂ ಹಣದ ರೂಪ ದಲ್ಲಿಯೂ ಬರಲಾರಂಭಿಸಿತು. ಮುಂದೆ ಆ ಕೂಲೀಮಠವೇ ಅಭಿವೃದ್ಧಿ ಹೊಂದುವ ಸೂಚನೆಗಳು ಕಂಡುಬಂದುವು. ಶ್ಯಾಮಯ್ಯನವರ ನಿಸ್ಪೃಹವಾದ ಶ್ರಮದಿಂದ ಕೆಲವರಾದರೂ ಕಲ್ಯಾಣದುರ್ಗದಲ್ಲಿ ಮಧ್ಯಮಶಾಲೆಯನ್ನು ಕಂಡು ಬಂದರು. ಕೆಲವು ಮಂದಿ ದೊಡ್ಡವರೂ ಸಹ ಓದುಬರಹವನ್ನು ಕಲಿತರು.

ಶ್ಯಾಮಯ್ಯನವರು ಆ ಹಳ್ಳಿಗೆ ಬರದೆ ಹೋಗಿದ್ದರೆ ಚಂದ್ರನ ವಿದ್ಯಾಭ್ಯಾಸವೂ ಸ್ವಲ್ಪದರಲ್ಲಿಯೇ ಮುಗಿಯು ತ್ತಿತ್ತೆಂದು ತೋರುತ್ತದೆ. ಗೌರಮ್ಮನವರೇನೋ ತಮ್ಮ ತೌರಾದ ಕಲ್ಯಾಣದುರ್ಗದಲ್ಲಿ ತಮ್ಮ ಮಾತೃಭಾಷೆಯ ಸರಳ ಗ್ರಂಥಗಳನ್ನು ಓದುವಷ್ಟು ಅದೃಷ್ಟವನ್ನು ಪಡೆದು ಗಂಡನ ಮನೆಗೆ ಬಂದಿದ್ದರು. ಆದುದರಿಂದಲೇ ಅವರು ಇಲ್ಲಿಯ ವರೆಗೂ ಕರ್ತವ್ಯಮೂಢರಾಗಿ ಕುಳಿತುಕೊಳ್ಳದೆ ಪ್ರಾಥಮಿಕ ವಿದ್ಯಾಭ್ಯಾಸದ ಬಹುಭಾಗವನ್ನೆಲ್ಲಾ ಮಗನಿಗೆ ತಾವೇ ಕಲಿಸಿದ್ದರು. ಅಷ್ಟಕ್ಕೆ ಸುಮ್ಮನಾಗದೆ ತಮ್ಮ ತೌರೂರಾದ ಕಲ್ಯಾಣದುರ್ಗದಲ್ಲಿ ಮಗನನ್ನು ಬಿಟ್ಟು ಮಧ್ಯಮಶಾಲೆಯ ವಿದ್ಯಾಭ್ಯಾಸವನ್ನೂ ಮುಂದುವರಿಸಬೇಕೆಂದಿದ್ದರು. ಆದರೆ ಚಂದ್ರಣ್ಣನು ಲೋಯರ್ ಸೆಕೆಂಡರಿ ಪೂರೈಸುವುದಕ್ಕಿಂತ ಹೆಚ್ಚಾಗಿ ಮುಂದಕ್ಕೆ ಓದಿಸುವ ವಿಷಯದಲ್ಲಿ ಗೌರಮ್ಮನವರು ಯೋಚನೆಯನ್ನೂ ಮಾಡಿರಲಿಲ್ಲ; ಧೈರ್ಯವನ್ನೂ ಮಾಡಿರಲಿಲ್ಲ.

ಆದರೆ ಶ್ಯಾಮಯ್ಯನವರ ಬುದ್ಧಿವಾದಗಳಿಂದಲೂ ಪ್ರೋತ್ಸಾಹದ ನುಡಿಗಳಿಂದಲೂ ಈಚೆಗೆ ಗೌರಮ್ಮನವರಿಗೆ ಪ್ರೌಢ ವಿದ್ಯಾಭ್ಯಾಸದಲ್ಲಿದ್ದ ಆಸಕ್ತಿಯು ಹೆಚ್ಚಿತು. ತಮ್ಮ ಒಬ್ಬನೇ ಮಗನನ್ನು ಕಾಲೇಜು ಪೂರೈಸುವವರೆಗೂ ಓದಿಸಬೇಕೆಂಬ ಉತ್ಕಟವಾದ ಆಸೆಯು ಅವರಲ್ಲಿ ಬೇರೂರಿತು.

ಅದಿರಲಿ. ಈ ಕಥೆಗೆ ವಸ್ತುವಾದ ಚಂದ್ರಣ್ಣ ಲಲಿತೆಯರ ಪ್ರೇಮದ ಬೆಳವಣಿಗೆಯನ್ನು ನಾವಿನ್ನು ನೋಡಬಹುದು. ಲಲಿತೆಯು ಬಹು ಸುಂದರಳಾದ ಹೆಣ್ಣುಮಗಳು. ರೂಪುಬಣ್ಣಗಳಲ್ಲಿಯೂ ಅಂಗಲಾವಣ್ಯಗಳಲ್ಲಿಯೂ ಪೂರ್ಣಚಂದ್ರನ ಸ್ವಂತ ಮಗಳೆಂಬಂತೆ ಶೋಭಿಸುತ್ತಿದ್ದಳು. ಆ ಚಿಕ್ಕ ಬಾಲಕಿಯ ಸಾತ್ವಿಕ ತೇಜಸ್ಸಿನ ರೂಪರಾಶಿಯನ್ನು ನೋಡಿದವರೆಲ್ಲರೂ ಮೋಹಮುಗ್ಧರಾಗುತ್ತಿದ್ದರು. ನಿರ್ಮಲವಾದ ಆನಂದದಲ್ಲಿ ಮುಳುಗುತ್ತಿದ್ದರು. ಗೌರಮ್ಮನವರಿಗೆ ಹೆಣ್ಣೊಂದನ್ನು ಹೆರುವ ಆಸೆ ಮೊದಲು ತುಂಬಿತ್ತು. ಪತಿದೇವನು ತೀರಿದನಂತರ ಅವರಿಗೆ ನಿರಾಸೆಯೂ ದುಃಖವೂ ಉಂಟಾಗಿದ್ದುವು. ಆದರೆ ಐದುವರ್ಷಗಳ ಲಲಿತೆಯನ್ನು ನೋಡಿದಂದಿನಿಂದಲೇ ಅವರ ಸಂಕಟವು ಹಾರಿಹೋಯಿತು. ಲಲಿತೆಯು ತಮ್ಮ ಊರಿಗೆ ಅದರಲ್ಲೂ ತಮ್ಮ ಮನೆಗೇ ಬಂದ ಮೇಲಂತೂ ತಮ್ಮ ಬಯಕೆಯ ಸಿದ್ಧಿಯೇ ಸಾಕಾರವಾಗಿ ತಮ್ಮ ಸಮೀಪಕ್ಕೆ ಬಂದಂತಾಯಿತು ಅಂದಿನಿಂದ ಲಲಿತೆಯು ಗೌರಮ್ಮನವರ ಸ್ವಂತ ಮಗಳಿಗಿಂತ ಹೆಚ್ಚಾದಳು. ತಾಯಿಯಿಲ್ಲದ ತಬ್ಬಲಿಯಾದ ಲಲಿತೆಯೂ ಸಹ ಗೌರಮ್ಮನವರನ್ನೇ ತಾಯಿಯೆಂದು ತಿಳಿದುಕೊಂಡಳು. ತಮ್ಮ ಮಗನಷ್ಟೇ ಯಾಕೆ ಇನ್ನೂ ಹೆಚ್ಚಾಗಿಯೇ ಮುದ್ದಿನ ಕಣಿಯಾಗಿದ್ದ

ಲಲಿತೆಯ ಮೇಲೆ ಗೌರಮ್ಮನವರಿಟ್ಟ ಪ್ರೀತಿಯ ಗಾಢತೆಯನ್ನು ಊಹಿಸುವುದಕ್ಕೂ ಸಾಧ್ಯವಾಗದು. ಆದರ್ಶವಾದ ತಾಯ್ತನಕ್ಕೂ ಆದರ್ಶವಾದ ಸೌಂದರ್ಯಕ್ಕೂ ಉಂಟಾದ ನಂಟು ಅದು. ಹನ್ನೆರಡು ವರ್ಷಗಳ ಚಂದ್ರಣ್ಣನೂ ಹಾಗೆಯೇ ಲಲಿತೆಯ ಮೇಲೆ ಪ್ರೀತಿಯಿಟ್ಟನು.

ಶ್ಯಾಮಯ್ಯನವರಲ್ಲಿ ಪಾಠಹೇಳಿಸಿಕೊಳ್ಳುವಾಗ ಮೊದಲುಗೊಂಡು ಸದಾಕಾಲದಲ್ಲಿಯೂ ಚಂದ್ರಣ್ಣ ಲಲಿತೆಯರು ಸಹಪಾಠಿಗಳಾಗಿರುತ್ತಿದ್ದರು. ಅವರ ಊರಿನ ಮುಂದೆ ಬೆಳೆದಿದ್ದ ಅರಳೀ ಬೇವು ಮರಗಳ ಜೋಡಿಯಾದರೂ ತಪ್ಪೀತು, ಆ ಇಬ್ಬರು ಮುದ್ದು ಮಕ್ಕಳ ಜೋಡಿಯು ಮಾತ್ರ ಯಾವಾಗಲೂ ತಪ್ಪುತ್ತಿರಲಿಲ್ಲ. ಹೀಗೆ ನೋಡುವ ಕಣ್ಣುಗಳಿಗೆಲ್ಲಾ ಆನಂದದ ಎರಡು ಕಣ್ಣುಗಳಾಗಿ ಚಂದ್ರ ಲಲಿತೆಯರು ಬೆಳೆದರು.

ಶ್ಯಾಮಯ್ಯನವರು ಕಲಿಸಿದ ಓದು ಪೂರೈಸಿದ ಮೇಲೆ ಚಂದ್ರನು ತನ್ನ ಹದಿಮೂರನೆಯ ವಯಸ್ಸಿನಲ್ಲಿ ಕಲ್ಯಾಣ ದುರ್ಗಕ್ಕೆ ಹೋಗಿ ತನ್ನ ತಾಯಿಯ ತೌರುಮನೆಯಲ್ಲಿದ್ದು ಕೊಂಡು ಮಾಧ್ಯಮಿಕ ಶಾಲೆಯನ್ನು ಸೇರಿದನು. ಅವನು ಆ ಮಾಧ್ಯಮಿಕ ಶಾಲೆಯ ಮೂರನೆಯ ತರಗತಿಗೆ ಬಂದಾಗ ಶ್ಯಾಮಯ್ಯನವರು ಲಲಿತೆಯನ್ನೂ ಅವನ ಜೊತೆಗೂಡಿ ಕಲ್ಯಾಣದುರ್ಗಕ್ಕೆ ಕರೆದುಕೊಂಡು ಹೋಗಿ ಅದೇ ಶಾಲೆಯ ಮೊದಲ ತರಗತಿಗೆ ಅವಳನ್ನು ಸೇರಿಸಿ ಬಂದರು. ಚಂದ್ರನ ಜೊತೆಯಲ್ಲಿ ಲಲಿತೆಗೆ ಪರಸ್ಥಳವೆಂಬ ಭಯವೇ ಉಂಟಾಗಲಿಲ್ಲ. ಕಲ್ಯಾಣದುರ್ಗಕ್ಕೂ ಅನಂತಪುರಕ್ಕೂ ಹೋಗಿ ಬರುವ ಬಸ್ಸುಗಳು ಗೌರೀಹಳ್ಳಿಗೆ ಸಮೀಪವಾಗಿಯೇ

ಹೋಗುತ್ತಿದ್ದುದರಿಂದ ಮಕ್ಕಳಿಬ್ಬರೂ ಪ್ರತಿಯೊಂದು ರಜಾಕಾಲದಲ್ಲೂ ಊರಿಗೆ ಬಂದು ಸೇರುತ್ತಿದ್ದರು. ಹೀಗೆ ಎರಡು ವರುಷಗಳು ಕಲ್ಯಾಣದುರ್ಗದಲ್ಲಿ ಕಳೆದುವು. ಆ ಕೊನೆಯ ವರುಷವೇ ಚಂದ್ರಣ್ಣನು ಲೋಯರ್ ಸೆಕೆಂಡರಿ ಪರೀಕ್ಷೆಗೆ ಕುಳಿತು ತೇರ್ಗಡೆಯಾದನು. ಲಲಿತೆಯೂ ಎರಡನೆಯ ತರಗತಿಯನ್ನು ಪಾಸುಮಾಡಿದಳು.

ನಂತರ ಮುಂದಿನ ವ್ಯಾಸಂಗಕ್ಕೆ ಶಾಮಯ್ಯನವರ ಇಷ್ಟದಂತೆ ಇಬ್ಬರೂ ಅನಂತಪುರಕ್ಕೆ ಹೋದರು. ಶ್ಯಾಮಯ್ಯನವರಿಗೆ ಅಲ್ಲಿ ವಿದ್ಯಾಇಲಾಖೆಯವರು ಬಹು ಮಂದಿ ಪರಿಚಿತರಿದ್ದರು. ಶ್ಯಾಮಯ್ಯನವರೇ ಅಲ್ಲಿಗೆ ಹೋಗಿ ಮಕ್ಕಳಿಬ್ಬರೂ ಜೊತೆಯಲ್ಲಿರಲೆಂದು ಇಬ್ಬರಿಗೂ ಜೊತೆಯಲ್ಲಿಯೇ ಊಟ ವಸತಿಗಳನ್ನೇರ್ಪಡಿಸಿ ಬಂದರು.

ಅಲ್ಲಿ ಅಂದರೆ ಅನಂತಪುರದಲ್ಲಿ ಐದು ವರುಷಗಳು ತಿಳಿನೀರಿನ ಪ್ರವಾಹದಂತೆ ಹರಿದು ಹೋದುವು. ಲಲಿತೆಯು ಈಗಾಗಲೇ ಎಸ್. ಎಸ್. ಎಲ್. ಸಿ. ತರಗತಿಯಲ್ಲಿ ಓದುತ್ತಿದ್ದಳು. ಚಂದ್ರಣ್ಣನಾದರೋ ಒಂದು ವರ್ಷವೂ ಫೇಲಾಗದಂತೆ ವ್ಯಾಸಂಗದಲ್ಲಿ ತಲ್ಲೀನಾತ್ಮನಾಗಿ ಓದುತ್ತಿದ್ದುದರಿಂದ ಈಗ ಬೋರ್ಡು ಕಾಲೇಜಿನಲ್ಲಿ ಫೈನಲ್ ಎಫ್. ಎ. ಅಥವಾ ಸೀನಿಯರ್ ಇಂಟರ್‌ಮಿಡಿಯೇಟ್ ತರಗತಿಯಲ್ಲಿ ಓದುತ್ತಿದ್ದನು. ಆ ಸಮಯದಲ್ಲಿ ಒಂದು ಅನಿರೀಕ್ಷಿತವಾದ ಸಂಗತಿ ನಡೆಯಿತು. ಅದೇ ಚಂದ್ರಣ್ಣನ ಭಾವೀಜೀವನದ ನದೀ ಪ್ರವಾಹವನ್ನೇ ಬೇರೆಡೆಗೆ ತಿರುಗಿಸಿಬಿಟ್ಟಿತು.

ಶ್ಯಾಮಯ್ಯನಿಗೆ ಒಬ್ಬ ಅಕ್ಕ ಇದ್ದಳು. ರಂಗಮ್ಮ ಎಂದು ಆಕೆಯ ಹೆಸರು. ತಂದೆತಾಯಿಗಳಿಗೆ ಇವರಿಬ್ಬರೇ ಮಕ್ಕಳು.

ಈಗ ಆ ರಂಗಮ್ಮನ ಮಗ ಜಯರಾಮುವೆಂಬ ಹುಡುಗನು ಅನಂತಪುರದಲ್ಲಿಯೇ ವ್ಯಾಸಂಗಮಾಡುತ್ತಿದ್ದನು. ಅವನೀಗಾಗಲೇ ಲಲಿತೆಯ ತರಗತಿಯಲ್ಲೇ ಓದುತ್ತಿದ್ದನು. ಅವನ ತಂದೆಯ ಊರು ಅನಂತಪುರ ಜಿಲ್ಲೆಯಲ್ಲಿಯೇ ಇದ್ದ ಒಂದು ಬೆಂಗಾಡು ಪ್ರದೇಶದ ಕುಗ್ರಾಮ. ಆ ಹಳ್ಳಿಯಲ್ಲಿ ಅವನಿಗಿದ್ದವಳು ತಾಯೊಬ್ಬಳೇ. ತಂದೆಯಿರಲಿಲ್ಲ. ಅವನ ಎಂಟನೆಯ ವಯಸ್ಸಿನಲ್ಲಿಯೇ ಆ ತಂದೆಯು ತೀರಿಕೊಂಡಿದ್ದನು. ಅವನಿಗೆ ನಾಲ್ಕೆಕರೆ ಬೆದ್ದಲು ಜಮೀನನ್ನು ಬಿಟ್ಟರೆ ಊರಲ್ಲಿ ಇನ್ನಾವ ಆಸ್ತಿಯೂ ಇರಲಿಲ್ಲ. ಅವನ ದುರಾದೃಷ್ಟಕ್ಕೆ ಈ ವರುಷ ಅವನು ಎಸ್. ಎಸ್. ಎಲ್. ಸಿ. ತರಗತಿಗೆ ಸೇರಿದ ಸ್ವಲ್ಪ ದಿನಗಳಲ್ಲಿಯೇ ಅವನ ತಾಯಿಯೂ ಮರಣ ಹೊಂದಿದಳು. ಜಯರಾಮುವಿನ ಸ್ಥಿತಿಯು ಜಹಳ ಚಿಂತಾಜನಕವಾಯಿತು. ಜಯರಾಮುವಿಗೆ ತನ್ನ ಸ್ವಂತ ಸೋದರ ಮಾವನಾದ ಶ್ಯಾಮಯ್ಯನ ಸಂಗತಿಯು ಕಾರಣಾಂತರಗಳಿಂದ ತಿಳಿದಿರಲಿಲ್ಲವಾದುದರಿಂದ ರಂಗಮ್ಮನ ಮರಣದ ಸಂಗತಿಯು ಶ್ಯಾಮಯ್ಯನಿಗೆ ತಿಳಿಯಲಿಲ್ಲ. ತಾಯಿಯ ಕರ್ಮಗಳನ್ನು ಪೂರೈಸಿಕೊಂಡು ಜಯರಾಮುವು ತನ್ನೂರಲ್ಲಿ ತನಗೇನೂ ಗತಿಯಿಲ್ಲದೆ ಏನಾದರೂ ಮಾಡಿ ಮ್ಯಾಟ್ರಿಕ್ ಪರೀಕ್ಷೆಯನ್ನು ಪಾಸು ಮಾಡಿಕೊಳ್ಳಲೇಬೇಕೆಂದು ನಿಶ್ಚಯಿಸಿ ಅನಂತಪುರವನ್ನು ಸೇರಿದನು. ಈ ಸಾರಿ ತನ್ನ ಕಷ್ಟವನ್ನು ಹೇಳಿಕೊಂಡು ಯಾರೋ ಧರ್ಮಿಷ್ಟರಾದ ವರ್ತಕರೊಬ್ಬರ ಮನೆಯಲ್ಲಿ ಒಂದು ಕೋಣೆಯಲ್ಲಿದ್ದುಕೊಂಡು ಅವರ ಕಾಂಪೌಂಡಿನ ತುಂಬಾ ತರಕಾರಿ ಗಿಡಗಳನ್ನು ಹಾಕಿ ಬಾವಿಯಿಂದ ನೀರೆತ್ತಿ ಹೊಯ್ದು ಬೆಳೆಸಿಕೊಡುತ್ತಾ ತನ್ನ ವ್ಯಾಸಂಗವನ್ನು ಮುಂದು

ವರಿಸಿದ್ದನು. ಜೊತೆಗೆ ಒಂದು ತಳ್ಳುವ ಗಾಡಿಯನ್ನು ಮಾಡಿಕೊಂಡು ಬೀಡಿ, ಬೆಂಕಿಪೆಟ್ಟಿಗೆ, ಸಾಬೂನು, ಮಕ್ಕಳ ಆಟದ ಬೊಂಬೆಗಳು ಇವೇ ಮುಂತಾದ ವಸ್ತುಗಳನ್ನು ಆ ವರ್ತಕರ ಅಂಗಡಿಯಿಂದಲೇ ಎರವಲು ಪಡೆದು ಆ ಗಾಡಿಯಲ್ಲಿಟ್ಟುಕೊಂಡು ವಾರಕ್ಕೊಂದು ದಿನ ಬೀದಿ ಬೀದಿಗಳಲ್ಲಿಯೂ ಸಂತೆಯಲ್ಲಿಯೂ ತಿರುಗಾಡಿ ಮಾರಾಟ ಮಾಡಿ ಅಲ್ಪಸ್ವಲ್ಪ ಹಣವನ್ನು ಸಂಪಾದಿಸುತ್ತಾ ತನ್ನ ಇತರೆ ಖರ್ಚುಗಳನ್ನು ಕಳೆದುಕೊಳ್ಳುತ್ತಿದ್ದನು. ಅಂತೂ ಅಷ್ಟು ಕಷ್ಟಸಹಿಷ್ಣುತೆಯಿಂದ ಓದುತ್ತಿದ್ದ ಇನ್ನೊಬ್ಬ ವಿದ್ಯಾರ್ಥಿಯೇ ಆ ಅನಂತಪುರದಲ್ಲಿ ಇರಲಿಲ್ಲವೆನ್ನಬಹುದು.

ಹೀಗೆ ತನ್ನ ದೀನ ವಿದ್ಯಾರ್ಥಿದೆಸೆಯನ್ನು ಕಳೆಯುತ್ತಿದ್ದ ಜಯರಾಮುವಿಗೆ ಇದ್ದಕ್ಕಿದ್ದಂತೆ ಐವತ್ತು ರೂಪಾಯಿಗಳ ಮಣಿಯಾರ್ಡರೂ ಒಂದು ಪತ್ರವೂ ಬಂದುವು. ಆ ಪತ್ರದಲ್ಲಿ ಈ ರೀತಿ ಬರೆದಿತ್ತು :—

"ಚಿರಂಜೀವಿ ಜಯರಾಮುವಿಗೆ ನಿನ್ನ ಸೋದರಮಾವನಾದ ಶ್ಯಾಮಯ್ಯನ ಆಶೀರ್ವಾದಗಳು........" ಇಷ್ಟನ್ನು ಓದಿದ ಜಯರಾಮುವಿಗೆ **ಶಾಮಯ್ಯ** ಎಂಬ ಹೆಸರು ಬಹುದೂರದ ನೆನಪಿನಂತೆ ತೋರಿಬಂದಿತು. ಮುಂದಕ್ಕೆ ಓದಿದನು :—

"ನನ್ನ ಏಕಮಾತ್ರ ಸೋದರಿಯೂ ಅಕ್ಕನೂ ಆದ ನಿನ್ನ ತಾಯಿಯು ಸ್ವರ್ಗಸ್ಥಳಾದ ಸಂಗತಿಯನ್ನು ನನಗೆ ತಿಳಿಸದೆ ಇರುವುದು ಸರಿಯೆ? ಸ್ವರ್ಗಸ್ಥಳಾದ ತಿಂಗಳ ಮೇಲೆ ನನಗೆ ಸಮಾಚಾರವು ತಿಳಿದು ಬಹಳ ಸಂಕಟವಾಯಿತು. ತಂದೆತಾಯಿಗಳಿಬ್ಬರನ್ನೂ ಕಳೆದುಕೊಂಡಿದ್ದರೂ ಸಹ ಈ

ಒಬ್ಬನೇ ಸೋದರಮಾವನನ್ನು ಮರೆಯಬಹುದೆ? ಆದರೆ ನಡೆದುಹೋದದ್ದನ್ನು ನೆನೆದು ದುಃಖಿಸಬೇಡ. ನನ್ನ ಮಗಳು ಲಲಿತೆಯೂ ಮ್ಯಾಟ್ರಿಕ್ಕಿನಲ್ಲಿ ಓದುತ್ತಿದ್ದಾಳೆ. ಅವಳ ಜೊತೆಯಲ್ಲಿ ಚಂದ್ರಣ್ಣನೂ ಇದ್ದಾನೆ. ಚಂದ್ರಣ್ಣನು ಯಾರೆಂಬುದು ನಿನಗೆ ತಿಳಿಯದು. ಆದರೆ ಒಂದು ಸಾರಿ ನೀನು ಈ ಕಾಗದವನ್ನು ತೋರಿಸಿ ಆತನನ್ನು ನೀನೇ ಪರಿಚಯ ಮಾಡಿಕೋ. ಆಮೇಲೆ ಈ ಜನ್ಮದಲ್ಲಿಯೇ ಆತನನ್ನು ನೀನು ಮರೆಯಲಾರೆ. ಆತನ ಶೀಲವನ್ನೂ ಘನತೆಯನ್ನೂ ನೀನೂ ಅನುಸರಿಸಬೇಕೆಂಬುದು ನನ್ನ ಅಭಿಲಾಷೆ. ನೀನು ಆತನೊಡನೆ ಎಲ್ಲಿಯವರೆಗೆ ಓದುತ್ತೀ ನೆಂಬ ಅಭಿಲಾಷೆಯನ್ನು ತೋರ್ಪಡಿಸಿದರೂ ನಾನು ಅದಕ್ಕಾಗಿ ಕೈಲಾದ ಸಹಾಯ ಮಾಡುತ್ತೇನೆ. ಮದುವೆ ಗಿದುವೆಯ ಚಿಂತೆಯನ್ನು ಸಧ್ಯ ಮನಸ್ಸಿನಲ್ಲಿ ಸುಳಿಸಿ ಕೊಳ್ಳಲೂ ಬೇಡ. ನಿನ್ನ ಭಾವೀ ಜೀವನದ ಸುಭದ್ರತೆ ಯನ್ನು ಮನಸ್ಸಿನಲ್ಲಿಟ್ಟುಕೊಂಡು ಕಷ್ಟಪಟ್ಟು ವ್ಯಾಸಂಗ ಮಾಡು.

ಇತಿ ಆಶೀರ್ವಾದಗಳು

ಶ್ಯಾಮಯ್ಯ

ಈ ಕಾಗದವನ್ನು ನೋಡಿ ಜಯರಾಮುವಿಗೆ ಆಶ್ಚರ್ಯ ವಾಯಿತು. ತನ್ನ ಸೋದರ ಮಾವನ ಹೆಸರನ್ನು ತನ್ನ ತಾಯಿಯ ಬಾಯಿಂದ ಕೇಳಿದ್ದನು. ಅವನ ತಾಯಿ ರಂಗಮ್ಮನು ತಮ್ಮನ ಮೇಲಿನ ಯಾವುದೋ ಹಿಂದಿನ ಮನ ಸ್ತಾಪದಿಂದ ಶ್ಯಾಮಯ್ಯನನ್ನು ಮಾತಾಡಿಸುವುದನ್ನೇ ಬಿಟ್ಟ

ಬಹು ವರ್ಷಗಳಾಗಿದ್ದುವು. "ನನಗೆಲ್ಲಿಯ ತಮ್ಮ. ನನ್ನ ತಮ್ಮ ಸತ್ತುಹೋಗಿ ಎಷ್ಟೋ ವರ್ಷಗಳಾದುವು." ಎಂದು ಅವರಿವರ ಕೂಡೆ ನಿಂದಿಸಿ ನುಡಿಯುತ್ತಿದ್ದಳು. ಬಡತನ ಅಜ್ಞಾನಗಳೇ ಹಳ್ಳಿಗಾಡಿನ ಜನತೆಯ ಸರ್ವ ಅನಿಷ್ಟಗಳಿಗೂ ಕಾರಣವೆಂಬುದು ಎಲ್ಲರಿಗೂ ತಿಳಿದ ವಿಷಯ. ಶ್ಯಾಮಯ್ಯನು ತನ್ನನ್ನೇ ತಾನು ನಿರ್ವಹಿಸುವುದು ದುರ್ಲಭವಾಗಿದ್ದುದರಿಂದ ನಿರಕ್ಷರಕುಕ್ಷಿಯೂ ರಾಜಸಸ್ವಭಾವದ ಅಜ್ಞಾನಿಯೂ ಆದ ತನ್ನ ಅಕ್ಕನು ಏನೇ ನಿಂದಿಸಿದರೂ ಕಿವಿಗೆ ಹಾಕಿಕೊಳ್ಳದೆ ಸಹಿಸಿಕೊಳ್ಳುತ್ತಿದ್ದನು. ಜೊತೆಗೆ ಸರ್ಕಾರಿ ಉದ್ಯೋಗದ ಕಾರಣದಿಂದ ಅಕ್ಕನಿಗೆ ಬಹುದೂರವಾಗಿ ಯಾವುದೋ ಹಳ್ಳಿಯಲ್ಲಿದ್ದು ಬಿಡುತ್ತಿದ್ದುದರಿಂದ ಆ ನಿಂದನೆಗಳೂ ಆತನ ಕಿವಿಗೆ ಅಷ್ಟಾಗಿ ಬೀಳುತ್ತಿರಲಿಲ್ಲ. ಆದರೆ ತನ್ನ ಹೆಂಡತಿಯು ಲಲಿತೆಯನ್ನು ಬಿಟ್ಟು ತೀರಿಕೊಂಡಾಗ ರಂಗಮ್ಮನು ಇನ್ನೂ ಐದು ವರ್ಷಗಳ ಚಿಕ್ಕ ಬಾಲಕನಾದ ತನ್ನ ಮಗ ಜಯರಾಮುವನ್ನು ಕರೆದುಕೊಂಡು ಒಮ್ಮೆ ಶ್ಯಾಮಯ್ಯನನ್ನು ಬಂದು ನೋಡಿದಳು. ಆದರೆ ಒಂದೆರಡು ದಿನಗಳಲ್ಲಿಯೇ ತನ್ನ ಹಿಂದಿನ ಮನಸ್ತಾಪಕ್ಕೆ ಕಾರಣವಾದ ಒಡವೆಗಳ ಸಂಗತಿಯನ್ನು ಎತ್ತಿ ವಿರಸವನ್ನುಂಟುಮಾಡಿದಳು :—ರಂಗಮ್ಮನಿಗೆ ಜಯರಾಮುವಿಗಿಂತ ಬಹಳ ಹಿರಿಯವಳಾದ ಒಬ್ಬ ಮಗಳಿದ್ದಳು- ಶ್ಯಾಮಯ್ಯನ ಓರಗೆಯವಳು. ಆದರೆ ಶ್ಯಾಮಯ್ಯನು ಆ ಹುಡುಗಿಯು ಬಡವರ ಮಗಳಾದರೂ ಗಂಡುಬೀರಿಯೆಂದೂ ಶೀಲವಂತೆಯಲ್ಲವೆಂದೂ ಅವರಿವರ ಬಾಯಲ್ಲಿ ಕೇಳಿದ್ದನು. ಜೊತೆಗೆ ಸ್ವಲ್ಪಮಟ್ಟಿಗೆ ವಿದ್ಯಾವಂತೆಯೂ ಸುಂದರಳೂ ಆದ ಹೆಣ್ಣೊಂದನ್ನು ಬೇರೆಯ ಕಡೆ ಒಲಿದು

ಮದುವೆಯಾಗುತ್ತೇನೆಂದು ಮಾತುಕೊಟ್ಟಿದ್ದನು. ಆದುದರಿಂದ ರಂಗಮ್ಮನ ಮಗಳನ್ನು ತಾನು ಮದುವೆಯಾಗಲು ಶ್ಯಾಮಯ್ಯನು ಒಪ್ಪಲಿಲ್ಲ. ರಂಗಮ್ಮ ತಮ್ಮನ ಮೇಲೆ ಮುನಿಸಿಕೊಂಡು ಬೇರೆಯ ಕಡೆ ತನ್ನ ಮಗಳಿಗೆ ಒಂದು ಗಂಡನ್ನು ನಿಶ್ಚಯ ಮಾಡಿದ್ದೂ ಆಯಿತು. ಆದರೆ ಸ್ವಭಾವತಃ ದಯಾಳುವಾದ ಶ್ಯಾಮಯ್ಯನು ಆ ಮದುವೆಯನ್ನು ತಾನೇ ಮುಂದೆ ನಿಂತು ಚೆನ್ನಾಗಿಯೇ ನಡೆಸಿದನು. ಆಗ ಹೆಣ್ಣಿನ ಮೈಮೇಲೆ ಹಾಕಲು ಗಂಡಿನ ಮನೆಯವರು ತಂದ ಒಡವೆ ಅವನ ಮರ್ಯಾದೆಯನ್ನುಳಿಸುವಂತಿರಲಿಲ್ಲ. ಬೆಳ್ಳಿಯ ಕಾಲುಂಗುರ, ಬೆಳ್ಳಿಯ ಒಂದು ಜೋಡಿ ಕಾಲಂದುಗೆ, ಒಂದು ಮೂಗು ಬಟ್ಟು, ಹೊಂಬಿತ್ತಾಳೆಯ ಹರಳಿಲ್ಲದ ಒಂದು ಜೊತೆ ಬೋಡು ಬೆಂಡೋಲೆಗಳು, ಇಷ್ಟರ ಜೊತೆಗೆ ಒಂಬತ್ತು ಬಣ್ಣದ ಒಂದು ಚಿನ್ನದ ತಾಳಿಯ ಬಟ್ಟು--ಇಷ್ಟೇ ಗಂಡಿನವರು ತಂದ ಒಡವೆ. ಹೆಚ್ಚು ತರುವುದಕ್ಕೂ ಅವರಿಂದ ಸಾಧ್ಯವಿರಲಿಲ್ಲ. ಶ್ಯಾಮಯ್ಯನು ಇದನ್ನು ನೋಡಿ ಅಕ್ಕನ ಸಮಾಧಾನಕ್ಕಾಗಿಯೂ ಮುಖ್ಯವಾಗಿ ತನ್ನ ಮರ್ಯಾದೆಗಾಗಿಯೂ ತನಗೆ ಪರಿಚಿತರಾದ ಒಬ್ಬ ಅನುಕೂಲಸ್ತರ ಮನೆಯಿಂದ ಗೆಜ್ಜೆಪಟ್ಟಿ, ಚಿನ್ನದ ಗೆಜ್ಜಡಿಕೆ, ಅಪರಂಜಿಯ ಹರಳಿನ ಬೆಂಡೋಲೆಗಳು, ಕೆನ್ನೆಚೈನು, ಕಾಲು ಚೈನು, ಜಡೆಬಿಲ್ಲೆ, -ಮುಂತಾದ ಸುಮಾರು ಸಾವಿರ ರೂಪಾಯಿ ಬೆಲೆ ಬಾಳುವ ಒಡವೆಗಳನ್ನು ಎರವಲು ತಂದು ಹೆಣ್ಣಿನ ಮೈಮೇಲೆ ಹಾಕಿದನು. ಮದುವೆಯಾಯಿತು. ನಂತರ ಮೂರು ತಿಂಗಳು ತುಂಬುತ್ತಲೂ ಪ್ರಸ್ತವೂ ಆಯಿತು. ಆಮೇಲೆ ಶ್ಯಾಮಯ್ಯನು ಒಡವೆಗಳನ್ನು ವಾಪಸ್ಸು ಕೇಳಿದರೆ ಹೆಣ್ಣು ಹಿಂದಕ್ಕೆ

ಕೊಡಲೊಪ್ಪಲಿಲ್ಲ. ಚಂಡಿಯವತಾರವನ್ನೇ ತಾಳಿಬಿಟ್ಟಳು! ರಂಗಮ್ಮನೂ ತಮ್ಮನು ತನ್ನ ಮಗಳನ್ನು ಮದುವೆಯಾಗಲಿಲ್ಲವೆಂಬ ಸಿಟ್ಟಿಗೆ ಶ್ಯಾಮಯ್ಯನ ವಿರುದ್ಧ ನಿಂತುಬಿಟ್ಟಳು! ಊರಿಗೂರೇ ಆ ರಗಳೆಯನ್ನು ನೋಡಬೇಕಾಯಿತು. ರಂಗಮ್ಮನ ಗಂಡನು ರಂಗಮ್ಮನ ಕೋಪಕ್ಕೆ ಹೆದರಿ ಬಕಧ್ಯಾನ ಮಾಡುತ್ತಾ ಮೂಲೆ ಸೇರಿಬಿಟ್ಟನು. ಶ್ಯಾಮಯ್ಯನು ಏಡಿಯದೋರೆಂದು ತಿಳಿದು ಹಾವಿನ ಬಿಲಕ್ಕೆ ಕೈಯಿಟ್ಟಂತಾಯಿತು! ಕೊನೆಗೆ ಊರಿನ ದೊಡ್ಡವರೆಲ್ಲಾ ಸೇರಿ ನ್ಯಾಯಮಾಡಿದರು-ರಂಗಮ್ಮನು, "ಅಷ್ಟೇ ಬೆಲೆಬಾಳುವ ಒಡವೆಗಳನ್ನು ತಮ್ಮ ಮಾಡಿಸಿಕೊಡುವುದಾಗಿ ಮಾತುಕೊಟ್ಟರೆ ಒಡವೆಗಳನ್ನು ವಾಪಸು ಕೊಡುತ್ತೇವೆ. ಇಲ್ಲದಿದ್ದರೆ ಇಲ್ಲ." ಎಂದು ಒಂದೇ ಹಟ ಹಿಡಿದಳು. ಶ್ಯಾಮಯ್ಯನಿಗೆ ಯೋಚನೆಗಿಟ್ಟುಕೊಂಡಿತು. ತಂದೆ ತಾಯಿಲ್ಲದ ತಾನು ಮುಂದೆ ಮದುವೆಯಾಗುವುದಕ್ಕೇ ಅನುಕೂಲವಿಲ್ಲ. ಇವರೊಂದಿಗೆ ಈ ಹೊಸ ಭಾರವನ್ನು ಹೇಗಪ್ಪಾ ಹೊರುವುದು? ಎಂದು ಪೇಚಾಡಿದನು. ಕೊನೆಗೆ ಸಧ್ಯದ ರಗಳೆ ತೀರಿದರಾಯಿತೆಂದು ಅಕ್ಕನಿಗೆ ಮಾತುಕೊಟ್ಟು ಎರವಲು ತಂದ ಒಡವೆಗಳನ್ನು ವಾಪಸು ಪಡೆದು ಎರವಲು ಕೊಟ್ಟ ಮನೆಯವರಿಗೆ ಆ ಒಡವೆಗಳನ್ನು ಕೊಟ್ಟು ಕೈ ತೊಳೆದುಕೊಂಡು ಹೊರಟುಹೋಗಿಬಿಟ್ಟನು. ಅಂದಿನಿಂದ ಇಂದಿನವರೆಗೂ ರಂಗಮ್ಮ ಮತ್ತು ರಂಗಮ್ಮನ ಮಗಳೂ ಸೇರಿ ಶ್ಯಾಮಯ್ಯನನ್ನು ಕೊಟ್ಟ ಭಾಷೆಯಂತೆ ಒಡವೆ ಮಾಡಿಸಿಕೊಡಬೇಕೆಂದು ಪೀಡಿಸುತ್ತಲೇ ಬಂದಿದ್ದರು. ಶ್ಯಾಮಯ್ಯನು ಅದಾವುದನ್ನೂ ಕಿವಿಗೆ ಹಾಕಿಕೊಳ್ಳದೆ ತಾನೊಲಿದ ಹೆಣ್ಣನ್ನೇ ಮದುವೆ ಮಾಡಿಕೊಂಡು ತೆಪ್ಪಗಿದ್ದುಬಿಟ್ಟನು.

ಹೀಗಿರಲು ಒಮ್ಮೆ ಶ್ಯಾಮಯ್ಯ ರಂಗಮ್ಮನ ಮಗಳೂರಿಗೆ ಕಾರಣಾಂತರದಿಂದ ಹೋಗಿದ್ದನು. ಅಲ್ಲಿ ಆತನನ್ನು ಕಂಡ ತಕ್ಷಣವೇ ರಂಗಮ್ಮನ ಮಗಳು ನಾಚಿಗೆಯನ್ನು ಬಿಟ್ಟು ಶ್ಯಾಮಯ್ಯನೊಡನೆ ಕಲಹಕ್ಕಾರಂಭಿಸಿದಳು. ಆ ದಿಸ ನಡೆದ ರಾದ್ಧಾಂತವನ್ನೂ ತನಗೆ ನಿಷ್ಕಾರಣವಾಗಿ ಉಂಟಾದ ಅವ ಮಾನವನ್ನೂ ಶ್ಯಾಮಯ್ಯನು ತನ್ನ ಜೀವಿತದಲ್ಲಿಯೇ ಮರೆ ಯುವಂತಿರಲಿಲ್ಲ. ಅಂದಿನಿಂದ ತನ್ನ ಅಕ್ಕನ ಮತ್ತು ಅಕ್ಕನ ಮಗಳ ಮುಖಗಳನ್ನು ಸಾಯುವವರೆಗೂ ನೋಡಬಾರ ದೆಂದು ನಿರ್ಧರಿಸಿ ಬಿಟ್ಟನು. ಅದರಂತೆ ಅತ್ತಕಡೆ ಮುಖ ತಿರುಗಿಸದೆ ಇದ್ದೂ ಬಿಟ್ಟನು. ಆದರೆ ತನ್ನ ಹೆಂಡತಿಯು ತೀರಿ ಹೋದಾಗ ಆ ಸಂಗತಿಯನ್ನು ಮಾತ್ರ ಅಕ್ಕನಿಗೆ ಹೋಗಿಬರುವವರ ಕೂಡೆ ತಿಳಿಸಿದ್ದನು. ತನ್ನ ಹೆಂಡತಿಯ ಕರ್ಮಕ್ಕೆ ಅಕ್ಕ ಬರುತ್ತಾಳೆಂದು ಆತನು ನಂಬಿರಲಿಲ್ಲ. ಆದರೆ ರಂಗಮ್ಮನು ಇದೇ ನೆಪವನ್ನು ಮಾಡಿಕೊಂಡು ತನ್ನ ಮಗ ಐದುವರ್ಷಗಳ ಜಯರಾಮುವಿನೊಂದಿಗೆ ಶ್ಯಾಮಯ್ಯನ ಮನೆಗೆ ಬಂದಳು. ಲೋಕ ಮೆಚ್ಚಲೆಂದು ಬಂದಿದ್ದಳೇ ವಿನಃ ತಮ್ಮನ ಮೇಲಿನ ಪ್ರೀತಿಯಿಂದ ಬಂದಿರಲಿಲ್ಲವೆಂಬುದು ಬಂದ ಎರಡು ದಿನಗಳಲ್ಲಿಯೇ ಶ್ಯಾಮಯ್ಯನಿಗೆ ಗೊತ್ತಾಯಿತು. ಆ ಎರಡು ದಿನಗಳಲ್ಲಿಯೇ ರಂಗಮ್ಮನು ತನ್ನ ಹಳೆಯ ರಾಗ ವನ್ನು ಎತ್ತಿದಳು. ಈಗ ಪ್ರೀತಿಯ ಮಡದಿಯನ್ನು ಕಳೆದು ಕೊಂಡು ಏಕಾಂಗಿಯಾದ ಶ್ಯಾಮಯ್ಯನು ತನಗುಳಿದಿದ್ದ ಒಂದು ವರ್ಷದ ಹೆಣ್ಣು ಕೂಸನ್ನು ಸಾಕುವುದು ಹೇಗಪ್ಪಾ ಎಂಬ ಚಿಂತೆಯಿಂದ ಕೊರಗುತ್ತಿದ್ದನು. ಹೀಗಿರುವಾಗ ಅಕ್ಕನ ಮಾತುಗಳನ್ನು ಕೇಳಿ ಆತನಿಗೆ ಸಹಿಸದಾಯಿತು. ಅಕ್ಕನ

ಮೇಲೆ ಎಲ್ಲಿಲ್ಲದ ಕೋಪವುಂಟಾಯಿತು. ಈ ಜನ್ಮದಲ್ಲಿಯೇ ಇನ್ನೊಮ್ಮೆ ಅವಳ ಮುಖವನ್ನು ನೋಡಬಾರದೆನಿಸಿತು. ಇಷ್ಟು ದಿನವಾದರೂ ತನ್ನ ಅಕ್ಕನಿಗೆ ಬುದ್ಧಿ ಬರದಿದ್ದುದಕ್ಕೆ ಶ್ಯಾಮಯ್ಯನಿಗೆ ತುಂಬಾ ಬೇಸರವಾಯಿತು. ಅಕ್ಕ ತಮ್ಮಂದಿರಿಗೆ ಬಹು ದೊಡ್ಡ ಜಗಳವೇ ಆಯಿತು. ಕೊನೆಗೆ ರಂಗಮ್ಮ ಮುನಿಸಿಕೊಂಡು ಶ್ಯಾಮಯ್ಯನ ಮೇಲೆ ನಾನಾ ಶಾಪಗಳನ್ನು ಹಾಕಿ ತನ್ನೂರಿಗೆ ಹೊರಟು ಹೋದಳು. ಇಬ್ಬರ ಬಡತನದಿಂದ ಮತ್ತು ರಂಗಮ್ಮನ ಮೂರ್ಖ ಹಟದಿಂದ ನಂಟು ಹರಿದುಹೋಯಿತೋ ಎಂಬಂತಾಯಿತು. ಇದಾದ ಮೂರು ವರುಷದೊಳಗೇ ರಂಗಮ್ಮನ ಗಂಡನೂ ಗತಿಸಿಹೋಗಿ ರಂಗಮ್ಮನು ವಿಧವೆಯಾದಳು. ಅವಳ ಹಣೆಯ ಬರಹವನ್ನು ಬ್ರಹ್ಮನು ಸರಿಯಾಗಿ ಬರೆದಿರಲಿಲ್ಲ.

ಜಯರಾಮುವಿಗೆ ಆ ಚಿಕ್ಕಂದಿನಲ್ಲಿ ಶ್ಯಾಮಯ್ಯನನ್ನು ನೋಡಿದ್ದು ಚೆನ್ನಾಗಿ ಜ್ಞಾಪಕ ಬರಲಿಲ್ಲ. ಆದರೆ ತಾಯಿಯ ಬಾಯಲ್ಲಿ ಶ್ಯಾಮಯ್ಯನ ಹೆಸರನ್ನು ಕೇಳಿದ್ದನು. ಆದರೂ ತಾಯಿಯಂತೆ ಅವನ ಮನಸ್ಸಿನಲ್ಲಿಯೂ ತನ್ನ ಸೋದರ ಮಾವನ ವಿಷಯವಾಗಿ ತಿರಸ್ಕಾರ ದ್ವೇಷಗಳಿದ್ದುದರಿಂದ ಕಾಲಕ್ರಮದಲ್ಲಿ ಸಂಪೂರ್ಣವಾಗಿ ಮರೆತುಬಿಟ್ಟಿದ್ದನು. ಆದರೆ ಎಷ್ಟೇ ಆಗಲಿ ಎಂತಹುದೇ ಆಗಲಿ ವಿದ್ಯಾಭ್ಯಾಸವು ತಾನೊದಗಿಸುವ ಸನ್ನಿವೇಶಬಲದಿಂದಲಾದರೂ ಅಜ್ಞಾನದ ಕಣ್ಣನ್ನು ಸ್ವಲ್ಪಮಟ್ಟಿಗಾದರೂ ತೆರೆಯುವುದಲ್ಲವೆ? ಜಯರಾಮುವೂ ಹೈಸ್ಕೂಲಿನಲ್ಲಿ ಒಂದೆರಡು ವರುಷಗಳು ಕಳೆದ ಮೇಲೆ ವಿಚಾರಜ್ಞನಾಗುತ್ತಾ ಬಂದಿದ್ದನು. ವಿಧವೆಯಾದ ಮೇಲೆ ಸುಮಾರು ಈ ಹದಿನೈದು ವರ್ಷಗಳ ಬಾಳಿನಲ್ಲಿ

ತನ್ನ ತಾಯಿಯ ನಡವಳಿಕೆಯೂ ಅವನಿಗೆ ಸರಿಯಾಗಿ ತೋರುತ್ತಿರಲಿಲ್ಲ. ಆದರೂ ಓದಿನ ಮೇಲೆ ವಹಿಸಿದ ಆಸಕ್ತಿಯಿಂದ ಯಾವ ಹಾಳು ಯೋಚನೆಗಳನ್ನೂ ಮನಸ್ಸಿಗೆ ಹಾಕಿಕೊಳ್ಳದೆ ಇದ್ದನು. ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಎರಡು ಸಾರಿ ಫೇಲಾದರೂ ಸಹ ಬಿಡದೆ ಬಹು ಸಹನೆಯಿಂದ ವ್ಯಾಸಂಗವನ್ನು ಮುಂದುವರಿಸುತ್ತಾ ಬಂದಿದ್ದನು. ಅವನ ಶ್ರದ್ಧೆ ಸಹನೆಗಳ ಫಲವಾಗಿ ಈಗ ಮ್ಯಾಟ್ರಿಕ್ ತರಗತಿಯಲ್ಲಿದ್ದನು. ಪಾಪ ಇಂತಹ ಸಮಯದಲ್ಲಿಯೇ ಅವನ ತಾಯಿಯು ಕಣ್ಮುಚ್ಚಿಕೊಂಡಳು. ತಾಯಿಯ ಮರಣವು ಜಯರಾಮುವಿನ ಜೀವನದಲ್ಲಿ ಒಂದು ಪರಿವರ್ತನೆಯ ಘಟ್ಟವೆನ್ನಬಹುದು. ಎಷ್ಟೇ ಆಗಲಿ ತಾಯಿ! ಹೆತ್ತವಳು! ಹೊತ್ತವಳು! ಮೊಲೆಯಿತ್ತವಳು! ಈ ಭೂಮಿ ತಾಯಿಯ ಮೇಲೆ ಎಲ್ಲರೂ ಪರಿಶುದ್ಧಾತ್ಮರೂ ಪರಿಶುದ್ಧ ಚಾರಿತ್ರವುಳ್ಳವರೂ ಆದ ತಾಯಿಯರೇ ಇದ್ದಾರೇನು? ಇನ್ನು ನಿರಕ್ಷರಕುಕ್ಷಿ, ಹಳ್ಳಿಗಾಡಿನ ಮುಗ್ಧ, ಬಡತನಕ್ಕೆ ಹೆದರಿದ ಜೀವ, ತನ್ನ ಆ ತಾಯಿಯ ಚಾರಿತ್ರವಿಮರ್ಶೆಯನ್ನು ತಾನು ಮಾಡಬಹುದೆ? ತನಗೆ ಜೀವವಿತ್ತವಳು. ಇಲ್ಲಿಯವರೆಗೂ ತನ್ನನ್ನು ಓದಿಸಿದವಳು. ಅಂಥವಳು ಬಾಳನ್ನು ಹೇಗೆ ನಿರ್ವಹಣ ಮಾಡಿದಳು? ಎಂಬ ಬಗ್ಗೆ ತಾನು ಆಲೋಚಿಸಬಹುದೇ? ಅಂತೂ ತಾಯಿ ಈಗ ಸತ್ತು ಸ್ವರ್ಗದಲ್ಲಿದ್ದಾಳೆ. ಇನ್ನು ತನ್ನ ಬಾಳನ್ನಾದರೂ ದೊಡ್ಡದು ಮಾಡಿಕೊಳ್ಳೋಣ. ಎಷ್ಟೇ ಕಷ್ಟವಾದರೂ ಓದಿ ನಾಲ್ವರು ಗೌರವಿಸುವಂತೆ ಬಾಳೋಣವೆಂಬ ಆಲೋಚನೆಗಳು ಜಯರಾಮುವಿನ ಆತ್ಮವನ್ನು ಮಥಿಸುತ್ತಿದ್ದುವು.

ಜಯರಾಮುವಿಗೆ ತನ್ನ ಸೋದರಮಾವ ಶ್ಯಾಮಯ್ಯನ ಕಾಗದವನ್ನು ಓದಿದಾಕ್ಷಣ ಮೊದಲು ಆಶ್ಚರ್ಯವೂ ದ್ವೇಷವೂ ಉಂಟಾದುವು. ಆದರೆ ಕೊನೆಗೆ ಅವನಿಗೆ ಶ್ಯಾಮಯ್ಯನ ಮೇಲೆ ತಾಯಿಯ ಮಾತುಗಳಿಂದ ಉಂಟಾಗಿದ್ದ ದ್ವೇಷ ಭಾವವು ನಂದಿತು. ಅನಾಥನಾದ ತನಗೆ ಇಂತಹ ಅವಸ್ಥೆ ಯಲ್ಲಿ ಇಷ್ಟು ಪ್ರೀತಿಯಿಂದ ಕಾಗದ ಬರೆಯಬೇಕಾದರೆ ತನ್ನ ಸೋದರಮಾವನು ಒಳ್ಳೆಯವನೇ ಆಗಿರಬೇಕೆಂದೂ ಊಹಿಸಿದನು. ತನ್ನ ತಾಯಿಯ ಸ್ವಭಾವವನ್ನು ಈಚೆಗೆ ವೇದನಾಪೂರ್ವಕವಾದ ಆಲೋಚನೆಗಳಿಂದ ತಿಳಿದಿದ್ದವನಾ ಗಿದ್ದುದರಿಂದ ಶ್ಯಾಮಯ್ಯನ ವಿಷಯದಲ್ಲಿ ತನ್ನ ತಾಯಿಯದೇ ತಪ್ಪಿರಬೇಕೆಂದೂ ಯೋಚಿಸಿದನು. ಆ ಯೋಚನೆಯಿಂದ ಅವನಿಗೆ ಸಮಾಧಾನವು ಮೂಡಿತು. ಆದುದರಿಂದ ಶ್ಯಾಮ ಯ್ಯನ ವಿಷಯದಲ್ಲಿ ಅವನಿಗೆ ಸಹಜವಾದ ಪ್ರೀತಿಯೇ ಉದ್ಭವಿಸಿತು. ಅವನ ಮನಸ್ಸು ಚೆನ್ನಾಗಿ ಕುದುರಿದ ಮೇಲೆ ಶ್ಯಾಮಯ್ಯನ ಪ್ರೀತಿಯ ಕಾಗದವು ಅವನಿಗೆ ಮಹತ್ಪರಿ ಣಾಮಕಾರಿಯಾಗಿ ತೋರಿತು! ಸಮುದ್ರದಲ್ಲಿ ಮುಳುಗಿ ಹೋದ ಹಡಗಿನಿಂದ ಬದುಕಿಕೊಳ್ಳಲು ಜೀವರಕ್ಷಕವಾದ ದೋಣಿಯೊಂದರಲ್ಲಿ ಕುಳಿತು ಏಕಾಂಗಿಯಾಗಿ ತೇಲುತ್ತಾ ಅನಂತ ವಿಸ್ತಾರವಾದ ತೆರೆಗಳ ಮೇಲೆ ಗುರಿಯಿಲ್ಲದೆ ಅಲೆಯುತ್ತಿದ್ದವನಿಗೆ ಬಹುದೂರದಲ್ಲಿ ಮಬ್ಬಾದ ದಿಗಂತದಲ್ಲಿ ಭೂಮಿಯ ಅಂಚು ಗೋಚರಿಸುವಂತೆ ಜಯರಾಮುವಿಗೆ ಸಂತೋಷವಾಯಿತು. ಆದುದರಿಂದ ಆ ಕಾಗದಕ್ಕೆ ಸಂತೋಷವನ್ನು ಸೂಚಿಸಿ ಒಂದು ವಿನಯಪೂರ್ವಕವಾದ ಪ್ರತ್ಯುತ್ತರವನ್ನು ಬರೆದು ಸುಮ್ಮನಾದನು.



# ಎರಡನೆಯ ದಳ

## ನಿಶೆಗೆ ನಕ್ಷತ್ರ

ಕಾರಿರುಳೊಳಾಗಸದಿ ತಾರೆ ನೂರಿದ್ದೇನು ? ।
ದಾರಿಗನ ಕಣ್ಗೆ ಬೇಕೊಂದು ಮನೆಬೆಳಕು ॥
ದೂರದಾ ದೈವವಂತಿರಲಿ, ಮಾನುಷಸಖನ ।
ಕೋರುವುದು ಬಡಜೀವ-ಮಂಕುತಿಮ್ಮ ॥

ಡಿ. ವಿ. ಜಿ.

......................ಹೇ ಆಶಾವಿಲಾಸಿನಿಯೆ,
ನಿಶೆಗೆ ನಕ್ಷತ್ರದೊಲೆ ನೀಂ ಬಹೆ ಸಿರಾಶೆ ಬರೆ.

— ಕುವೆಂಪು.

ಜಯರಾಮುವು ತನ್ನ ತರಗತಿಯಲ್ಲಿಯೇ ಅದ್ವಿತೀಯ ಸೌಂದರ್ಯದಿಂದ ರಾರಾಜಿಸುತ್ತಿದ್ದ ಲಲಿತೆಯನ್ನು ಎಷ್ಟೋ ದಿನಗಳಿಂದ ನೋಡಿದ್ದನು; ಅಪರಿಚಿತರೆಲ್ಲರೂ ನೋಡುವಂತೆ. ಜೊತೆಗೆ ಲಲಿತೆಯು ಪಾಠಶಾಲೆಯಿಂದ ಹೊರಗೆ ಯಾವಾಗಲೂ ಚಂದ್ರಣ್ಣನೆಂಬ ತನಗಪರಿಚಿತನಾದ ಕಾಲೇಜು ವಿದ್ಯಾರ್ಥಿಯೊಡನಿರುತ್ತಿದ್ದುದನ್ನೂ ನೋಡಿದ್ದನು. ಆ ಅಪರಿಚಿತನು ಕಾಲೇಜು ತರುಣನಾಗಿದ್ದು ಶ್ರೀಮಂತ ತರುಣರ ಜಾತಿಯವನಂತೆ ತೋರುತ್ತಿದ್ದುದರಿಂದ ಜಯರಾಮುವು ಅವನನ್ನು ಎಂದೂ ಮಾತಾಡಿಸಿರಲಿಲ್ಲ. ಅಲ್ಲದೆ ಚಂದ್ರ ಲಲಿತೆಯರ ರೂಪು ಬಣ್ಣಗಳ ಸಾದೃಶ್ಯದಿಂದ ಬಹುಶಃ ಅವರಿಬ್ಬರೂ ಅಣ್ಣತಂಗಿಯರಾಗಿರಬೇಕೆಂದೂ ಭಾವಿಸಿಕೊಂಡಿದ್ದನು. ಶ್ಯಾಮಯ್ಯನವರ ಕಾಗದವನ್ನು ನೋಡಿದ ಮೇಲೆ ಜಯರಾಮುವಿನ ಹೃದಯದಲ್ಲಿ ಚಂದ್ರ ಲಲಿತೆಯರ ವಿಷಯ

ವಾಗಿ ಭಾವಗಳ ತಾಂಡವವೇ ನಡೆಯಿತೆನ್ನಬಹುದು. ಲಲಿತೆಯು ತನ್ನವಳೆಂಬ ಭಾವನೆಯಿಂದ ಅವನಿಗಾದ ಆನಂದಕ್ಕೆ ಪಾರವೇ ಇಲ್ಲದಂತಾಯಿತು. ಆದರೆ ಲಲಿತೆಯಷ್ಟೇ ಸುಂದರನಾದ ಚಂದ್ರಣ್ಣನ ಜೊತೆಯಲ್ಲಿ ಆಗಲೇ ಹದಿನಾಲ್ಕು ತುಂಬುತ್ತಿದ್ದ ಅವಳು ಇದ್ದುದು ತರುಣರಲ್ಲಿ ಸಹಜವಾಗಿ ಉಂಟಾಗುವ ಅಸೂಯಾಭಾವವನ್ನು ಅವನಲ್ಲೂ ಕೆರಳಿಸಿತು. ಶ್ಯಾಮಯ್ಯನವರು ಬಗೆದಂತೆ ಚಂದ್ರಣ್ಣನ ಪರಿಚಯವನ್ನು ಮಾಡಿಕೊಳ್ಳುವುದಿರಲಿ ಅದಕ್ಕಿಂತ ಮುಂಚೆಯೇ ಚಂದ್ರಣ್ಣನ ಮೇಲೆ ಉರಿಯಹತ್ತಿದನು! ಆದರೆ ಚಂದ್ರಣ್ಣನಿಗಿಂತಲೂ ತಾನು ಚಿಕ್ಕವನಾಗಿದ್ದುದರಿಂದಲೂ, ಬಡವನ ಸಿಟ್ಟು ದವಡೆಗೆ ಮೂಲವೆನ್ನುವುದು ಅವನಿಗೆ ಅನುಭವವಿದ್ದುದರಿಂದಲೂ ಮತ್ತು ಏನು ಮಾಡುವುದಕ್ಕೂ ತನ್ನಿಂದ ಅಸಾಧ್ಯವಾಗಿದ್ದುದರಿಂದಲೂ ಜಯರಾಮುವು ಒಂದು ವಾರ ಸುಮ್ಮನೇ ಕುದಿಯುತ್ತಿದ್ದನು. ಆ ಸಮಯದಲ್ಲಿ ಕೋಣೆಯಲ್ಲಿ ಮಲಗಿದಾಗ ಹಾಸಿಗೆಯ ಮೇಲೆ ಎಷ್ಟು ಕಣ್ಣೀರು ಸುರಿಸಿದನೋ ಬಲ್ಲದರಾರು? ರಾತ್ರಿ ಮಲಗಿಕೊಂಡು ತನ್ನ ತಾಯಿಯನ್ನು ನೆನೆಯುವನು. ತಾಯಿಯ ಮೇಲೆ ಕರುಣೆ ಕೋಪಗಳೆರಡೂ ಮೂಡಿ ಅವನ ಒಡಲನ್ನು ಕುದಿಸುತ್ತವೆ! ಒಡನೆಯೇ ಆ ತನ್ನ ಸೋದರಿಯನ್ನು ನೆನೆಯುವನು. ಅವಳು ತೌರೂರಿನಲ್ಲಿ ಮಾತ್ರವಲ್ಲ ಗಂಡನ ಊರಿನಲ್ಲಿಯೂ ಕೀಳ್ನಡೆಯಲ್ಲಿ ಬಯಲಿಗೆ ಬಂದಿರುವುದನ್ನು ನೆನೆದು ಹಲ್ಲು ಹಲ್ಲು ಕಡಿದು ಕೋಪತಾಪಗಳಲ್ಲಿ ಮಸಗುವನು! ಇನ್ನು ಎಂದೋ ತೀರಿ ಹೋದ ತನ್ನ ತಂದೆಯನ್ನು ನೆನೆಯುವನು. ಅವನೊಬ್ಬ ಹೇಡಿ. ಹೆಂಗಸಿನ ಮರೆಯ ಆಳು. ಜಡಜೀವಿ. ಕೆಲಸವೆಂದರೆ ಮೈ

ಬಾಗದ ಸೋಮಾರಿ. ಯಾರಾದರೂ ತಂದು ಹಾಕಿದರೆ ವಿವೇಚನೆಯಿಲ್ಲದೆ ತಿಂದು ತನ್ನ ಸೋಂಬೆಜೀವನವನ್ನು ಕಳೆಯುವನು. ಇಂತಹ ತಂದೆಯ ನೆನಪು ಪ್ರಪಂಚಜ್ಞಾನವುಳ್ಳ ತರುಣನಾದ ಜಯರಾಮುವಿನಲ್ಲಿ ಎಂತಹ ಭಾವಗಳನ್ನು ಕೆರಳಿಸಿರಬಹುದೆಂಬುದನ್ನು ವಾಚಕರೇ ಊಹಿಸಿಕೊಳ್ಳಲಿ. ಇನ್ನು ತನ್ನ ಪಾಡು: "ನಾನೊಬ್ಬ ಅನಾಥ! ದಿಕ್ಕಿಲ್ಲದವನು! ಪಾಠಗಳಲ್ಲಿ ಮೇಧಾವಿಯಲ್ಲ! ಚಂದ್ರಣ್ಣನಷ್ಟು ಸುಂದರನೂ ಅಲ್ಲ. ಹೀಗಿದೆ ನನ್ನ ಪಾಡು! ಚಂದ್ರಣ್ಣನಾದರೋ ಶ್ರೀಮಂತರ ಮಗನಾಗಿ ಕಾಣುತ್ತಾನೆ. ಕಾಲೇಜು ತರುಣನಾಗಿದ್ದಾನೆ. ಅವನ ಜೊತೆಯಲ್ಲಿಯೇ ಲಲಿತೆಯನ್ನು ಮಾವ ನಿರ್ಭೀತಿಯಿಂದ ಓದಲು ಕಳಿಸಿರಬೇಕಾದರೆ ಚಂದ್ರಣ್ಣನವರ ಮನೆಯಿಂದ ಮಾವ ಏನೇನು ಸಹಾಯವನ್ನು ಪಡೆದಿದ್ದಾನೆಯೋ ಬಲ್ಲವರಾರು? ಅಲ್ಲದೆ ಕಾಗದದಲ್ಲಿ 'ಮದುವೆಯ ಚಿಂತೆಯನ್ನು ಸಧ್ಯ ಮನಸ್ಸಿನಲ್ಲಿ ಸುಳಿಸಿಕೊಳ್ಳಲೂ ಬೇಡ' ಎಂದು ಮಾವ ಬರೆದಿರುವುದನ್ನು ನೋಡಿದರೆ ಮಾವನಿಗೆ ಮಗಳನ್ನು ಚಂದ್ರಣ್ಣನಿಗೇ ಕೊಡುವ ಇಷ್ಟವಿದ್ದಂತೆ ಕಾಣುತ್ತದೆ. ಅಷ್ಟು ಶ್ರೀಮಂತರ ಮನೆಯವನು! ಅಷ್ಟು ಸುಂದರನು! ಮುಂದೆ ಪದವೀಧರನಾಗುವವನು! ಆದುದರಿಂದ ಅಂತಹ ಅಳಿಯನನ್ನು ಕಳೆದುಕೊಳ್ಳಲು ನಮ್ಮ ಮಾವನು ಇಷ್ಟಪಟ್ಟಾನೆಯೇ? ಆಗಲೇ ಮಾತೂ ಕೊಟ್ಟಿರಬೇಕೆಂದು ತೋರುತ್ತದೆ! ಇನ್ನು ಏನೋ ಅಕ್ಕನ ಮಗನೆಂಬ ಸಹಜವಾದ ಮರುಕದಿಂದ ಹೀಗೆ ನನಗೆ ಕಾಗದ ಬರೆದಿರಬಹುದು. ಏನೋ ನನಗೂ ಅಲ್ಪಸ್ವಲ್ಪ ಸಹಾಯ ಮಾಡಬಹುದು. ಮುಂದೆ ಬೇರೆ ಯಾವುದೋ ಒಂದು ಹೆಣ್ಣನ್ನು

ನನಗೂ ಕಟ್ಟ ಸಮಾಧಾನ ಮಾಡಲು ಹವಣಿಸಿರಬಹುದು. ಇಷ್ಟೇ ನಿಜ. ತಾಯಿಗೆ ಜನ್ಮದ್ವೇಷಿಯಾಗಿ ದೂರವಾಗಿ ಇಲ್ಲಿಯವರೆಗೂ ನನಗಪರಿಚಿತನಾಗಿದ್ದ ಆ ಶ್ಯಾಮಯ್ಯಮಾವ ನನಗಿನ್ನೇನು ಹೆಚ್ಚು ಮಾಡಿಯಾನು? .... ಇನ್ನು .... ಲಲಿತೆ. ಹಾ ಲಲಿತೇ, ನಿನ್ನನ್ನು ನಾನೆಷ್ಟು ಪ್ರೀತಿಸುತ್ತೇನೆ! ದೇವೀ, ಈ ದೀನನು ನಿನ್ನ ತರಗತಿಯಲ್ಲೇ ಓದುತ್ತಿದ್ದರೂ ನಿನ್ನ ಸಂಬಂಧದವನೆಂದು ನೀನು ಬಲ್ಲೆಯಾ? ಇಲ್ಲ! ನೀನರಿಯೆ! ನೀನರಿತಿದ್ದರೆ ಇಲ್ಲಿಯವರೆಗೂ ನನ್ನನ್ನು ಮಾತಾಡಿಸದೆ ಸುಮ್ಮನಿರುತ್ತಿದ್ದೆಯಾ? ನಿನ್ನ ತಂದೆಯೂ ನನ್ನ ವಿಷಯ ವನ್ನು ನಿನಗೆ ಹೇಳಿಲ್ಲ. ನಿನ್ನ ನನ್ನ ಸಂಬಂಧವು ಆಗಬೇಕೆಂಬ ಆಶೆಯಿದ್ದರಲ್ಲವೆ ಹೇಳುವುದು? ಅಂತೂ ಈ ಅನಾಥನಾರೆಂಬು ದನ್ನು ನೀನರಿಯೆ; ಲಲಿತಾ, ನೀನರಿಯೆ. ಅರಿತು ತಾನೆ ನಿನಗಾಗಬೇಕಾದುದೇನಿದೆ? ಅಂಥ ಸುಂದರನಾದ ಕಾಲೇಜು ತರುಣನು ಜೊತೆಯಲ್ಲಿರಬೇಕಾದರೆ ನನ್ನಂಥ ಭಿಕಾರಿಯನ್ನು ನೀನು ಒಲಿದೀಯಾ? ಲಲಿತಾ, ನಿನ್ನ ಹೃದಯವನ್ನಾಗಲೇ ಚಂದ್ರಣ್ಣನು ಸೂರೆಗೊಂಡಿರುವುದರಲ್ಲಿ ಸಂಶಯವೇನು? ಆಶ್ಚರ್ಯವೇನು? ಲಲಿತಾ, ಆದರೂ ನೀನು ನನ್ನವಳೆಂದು ತಿಳಿದಮೇಲೆ ಈ ದೀನನ ಹೃದಯದಲ್ಲಿ ನಿನ್ನ ಮೇಲೆ ಉಂಟಾ ಗಿರುವ ಪ್ರೇಮವೆಂತಹುದೆಂಬುದನ್ನು ಬಲ್ಲೆಯಾ? ಅಯ್ಯೋ, ಇದೆಲ್ಲಾ ನನ್ನ ಮುಗಿಲ ಕನಸು! .... .... " ಇಂತಹ ಭಾವ ತರಂಗಗಳ ಹೊಯ್ಲಿನಲ್ಲಿ ಜಯರಾಮುವು ಸುರಿಸಿದ ಕಣ್ಣೀ ರೆಷ್ಟೋ? ಪಟ್ಟ ಪಶ್ಚಾತ್ತಾಪವೆಷ್ಟೋ? ಚಿಂತೆಗಳ ಬೇವಸ ದಲ್ಲಿ ಬೆಂದು ಅವನ ಶರೀರವು ಬಾಡಿತು. ಆದರೆ ಅವನ ಹೃದಯವು ಪುಟವಿಟ್ಟಂತಾಗಿ ಸಾತ್ವಿಕಗಿರಿಗೇರಲು ಹವಣಿಸು

ತ್ತಿತ್ತು. ಅವನ ಕಲ್ಪನೆಯಲ್ಲಿ ಅವನು ಒಂದು ಗಗನಚುಂಬಿತ ವಾದ ಭವ್ಯಗಿರಿಯನ್ನು ಏರಲಾರದೆ ಏರುತ್ತಿರುವಂತೆ ಭಾಸ ವಾಗುತ್ತಿತ್ತು! ಆ ಏರುವಿಕೆಯಲ್ಲಿ ಅವನಿಗೆ ಅತೀವವಾದ ಆಯಾಸವಾದರೂ ಗಿರಿಯ ಮುಡಿಯಲ್ಲಿ ಮೂಡಣದಿಂದ ಸಿಡಿದು ಬಂದ ಮೊದಲ ಹೊಂಬೆಳಕಿನಲ್ಲಿ ಲಲಿತೆಯು ನಗುತ್ತಾ ನಲಿಯುತ್ತಾ ತನ್ನನ್ನು ಸನ್ನೆಗೈದು ಕರೆಯುತ್ತಿರು ವಂತೆ ಅವನ ಪ್ರೇಮತಪ್ತವಾದ ಹೃದಯಕ್ಕೆ ಗೋಚರಿಸು ತ್ತಿತ್ತು! ಆದರೆ ತಾನಿನ್ನೂ ತಪ್ಪಲಿನ ಕೊರಕಲಲ್ಲಿ ಇನ್ನೂ ಗಾಢವಾಗಿ ಮುತ್ತಿರುವ ಕತ್ತಲಲ್ಲಿ ಹೆಣಗಾಡುತ್ತಿರುವಂತೆ ತೋರಿ ಅವನಿಗೆ ಬಹಳ ಯಾತನೆಯಾಗುತ್ತಿತ್ತು.

ಒಂದು ವಾರವು ಕಳೆಯಿತು. ಇನ್ನು ಜಯರಾಮುವಿಗೆ ತಡೆಯಲಾಗಲಿಲ್ಲ. ಕೊನೆಗೆ ಭಾನುವಾರದ ದಿನ ಬೆಳಗಿನ ಸಮಯದಲ್ಲಿ ಮೂವನ ಕಾಗದವನ್ನು ತೆಗೆದುಕೊಂಡು ಚಂದ್ರಣ್ಣ ಲಲಿತೆಯರು ವಾಸಿಸುತ್ತಿದ್ದ ಕೊಠಡಿಗೆ ಹೋದನು. ಶ್ಯಾಮಣ್ಣನವರ ಕಾಗದದಿಂದಲೇ ಅವರಿರುವ ಸ್ಥಳವು ತಿಳಿ ದಿತ್ತು. ಅವರಿದ್ದ ಕೋಣೆಯು ದೊಡ್ಡದಾಗಿತ್ತು. ಅದರಲ್ಲಿ ಒಂದಕ್ಕೊಂದು ಸ್ವಲ್ಪ ದೂರವಾಗಿ ಎರಡು ಮಂಚಗಳಿದ್ದುವು. ಎರಡು ಮಂಚಗಳಿಗೂ ಸೊಳ್ಳೆಯ ಪರದೆಯನ್ನು ಕಟ್ಟಿತ್ತು. ಆ ಎರಡು ಮಂಚಗಳ ಮಧ್ಯೆ ಬಾಗಿಲಕಡೆಗೆ ಚೆನ್ನಾಗಿ ಎರಡು ಜೋಡಿ ಕುರ್ಚಿ ಮೇಜುಗಳು ಜೋಡಿಸಿಟ್ಟಂತೆ ಇದ್ದುವು. ಆ ಎರಡು ಕುರ್ಚಿಗಳ ಮೇಲೂ ಚಂದ್ರಣ್ಣ ಲಲಿತೆಯರು ಕುಳಿತುಕೊಂಡು ಮೌನವಾಗಿ ಓದುತ್ತಿದ್ದರು. ಬಾಗಿಲ ಇಕ್ಕೆಲ ಗಳಲ್ಲಿ ತೆರೆದಿದ್ದ ವಿಶಾಲವಾದ ಎರಡು ಕಿಟಕಿಗಳಿಂದ ಕೋಣೆಯು ತುಂಬಾ ಬೆಳಕು ಸಾಕೆನ್ನುವಷ್ಟಿತ್ತು. ಜಯ

ರಾಮುವು ಇದೆಲ್ಲವನ್ನೂ ಹೊರಗಡೆಯಿಂದಲೇ ನೋಡಿ ಬಾಗಿಲನ್ನು ಮೆಲ್ಲನೆ ತಟ್ಟುವೆನೆಂದು ಕೈಚಾಚಿದನು. ಭಾವ ತೀವ್ರತೆಯಿಂದ ಅವನ ಶರೀರವು ಕಂಪಿಸಲು ಅವನ ಕೈ ಸ್ವಾಧೀನ ತಪ್ಪಿ ಬಾಗಿಲನ್ನು ಸ್ವಲ್ಪ ಬಲವಾಗಿ ಹಿಂದಕ್ಕೆ ತಳ್ಳಿತು! ಅಗಳಿ ಹಾಕದೆ ಸುಮ್ಮನೆ ಮುಂದಕ್ಕೆ ಮುಚ್ಚಿದ್ದ ಕದವು ತೆರೆಯಿತು. ಹೊಸಬೆಳಕು ಒಳಗಿದ್ದ ವ್ಯಕ್ತಿಗಳ ಬೆನ್ನ ಕಡೆಯಿಂದ ಪುಸ್ತಕಗಳ ಮೇಲೆ ಬಿದ್ದಿತು. ಜೊತೆಗೆ ಹೆಜ್ಜೆಯ ಸದ್ದೂ ಕೇಳಿಸಿತು. ಚಂದ್ರಲಲಿತೆಯರಿಬ್ಬರೂ ಕುರ್ಚಿಗಳಲ್ಲಿ ಕುಳಿತಿದ್ದಂತೆಯೇ ಹಿಂತಿರುಗಿ ನೋಡಿದರು. ಅವರ ತೇಜಃ ಪುಂಜವಾದ ಸುಂದರ ಮುಖಗಳೆರಡೂ ಅಕ್ಕಪಕ್ಕದಲ್ಲಿ ಜೋಡಿಸಿಟ್ಟಂತೆ ಜಯರಾಮುವಿನ ಕಣ್ಣಿಗೆ ಸ್ವರ್ಗಸುಂದರ ವಾಗಿ ಕಂಡುವು. ಮರುಕ್ಷಣದಲ್ಲಿಯೇ ಆ ಚಂದ್ರಣ್ಣನ ಸ್ಥಾನದಲ್ಲಿ ತಾನಿದ್ದಿದ್ದರೆ? ಎಂಬ ಊಹೆ ಅವನ ಮನದಲ್ಲಿ ಮೂಡಿ ಹಾಗಿಲ್ಲದಿರುವುದರಿಂದ ಅವನ ಹೃದಯದ ಸಂಕಟವೂ ಮರುಕೊಳಿಸಿತು. ಜಯರಾಮುವನ್ನು ಕಂಡಾಕ್ಷಣ ಲಲಿತೆಯ ವದನದಲ್ಲಿ ಅಪರಿಚಿತ ಆಗಂತುಕನನ್ನು ನೋಡಿದರೆ ಉಂಟಾ ಗುವ ಭಾವವುಂಟಾಗಿ ಏನಿದ್ದರೂ ಚಂದ್ರಣ್ಣನು ಮಾತಾಡಿಸಿ ಕೊಳ್ಳುತ್ತಾನೆಂದು ಮತ್ತೆ ತನ್ನ ಮುಖವನ್ನು ತಿರುಗಿಸಿ ಕೊಂಡು ವಿನಯದಿಂದ ತಲೆಬಾಗಿಸಿ ತಾನು ಓದುತ್ತಿದ್ದ ಪುಸ್ತಕದಲ್ಲಿ ಮಗ್ನಳಾದಳು. ಚಂದ್ರಣ್ಣನು ಗಂಭೀರವಾಗಿ ಮೇಲೆದ್ದು, "ಬನ್ನಿ ಸ್ನೇಹಿತರೆ. ನೀವಾರು ಸ್ವಾಮಿ? ನಿಮ ಗೇನು ಬೇಕು? ಒಳಗೆ ಬನ್ನಿ........ಲಲಿತಾ, ಅವರಿಗೆ ಕುರ್ಚಿ ಯನ್ನು ಬಿಟ್ಟು ನೀನು ಸ್ವಲ್ಪ ಮಂಚದ ಮೇಲೆ ಓದಿಕೋ." ಎಂದನು. ಲಲಿತೆಯು ಹಾಗೆಯೇ ಮಾಡಿ ತನ್ನ ಪುಸ್ತಕದಲ್ಲಿ

ಮುಖವಿಟ್ಟವಳು ತಲೆಯನ್ನು ಮೇಲಕ್ಕೆತ್ತಲಿಲ್ಲ. ಜಯ ರಾಮುವಿಗೆ ಆ ಸುಸ್ವಾಗತದ ನಿರಾಡಂಬರವೂ ಸರಳಧೀರವೂ ಆದ ಶೈಲಿಯನ್ನು ನೋಡಿ ಈಜಲು ಸಿದ್ಧನಾದವನಿಗೆ ತೊರೆ ಗಿಳಿಯುವ ಮುನ್ನವೇ ತೆರೆಯು ಮೇಲೇರಿ ತನ್ನನ್ನು ಸೆಳೆದು ಕೊಂಡಂತಾಯಿತು! ಜೊತೆಗೆ ಹೆಣ್ಣಾದ ಲಲಿತೆಯೂ ಅಲ್ಲಿ ದ್ದುದರಿಂದ ಜಯರಾಮುವನ್ನು ನಾಚಿಕೆ ಅಧೈರ್ಯಗಳು ಮುಸುಕಿದಂತಾಗಿ ಭಾವಕಂಪನದಿಂದ ನಡುಗಿದನು! ಮುಂದಕ್ಕೆ ಕಾಲಿಡುವುದಕ್ಕೇ ಬಾರದೆ ತನಗಿಂತ ಸುಮಾರು ಮೂರು ವರ್ಷಗಳಿಗೆ ಹಿರಿಯವನಾಗಿದ್ದ ಚಂದ್ರಯ್ಯನ ವ್ಯಕ್ತಿ ಪ್ರಭಾವದಿಂದ ತಲೆಬಾಗಿದವನಾಗಿ ಬಾಗಿಲಲ್ಲಿಯೇ ನಿಂತನು. ಚಂದ್ರಣ್ಣನು ಆಗಂತುಕನು ತನಗಿಂತ ಚಿಕ್ಕವನಾಗಿದ್ದುದ ರಿಂದಲೂ ಅವನು ತನ್ನಲ್ಲಿ ತೋರಿಸಿದ ಭಾವಗೌರವ ದಿಂದಲೂ ವಾತ್ಸಲ್ಯದಿಂದ ತುಂಬಿದವನಾಗಿ ಜಯರಾಮುವಿನ ಸಮೀಪಕ್ಕೆ ಹೋಗಿ, "ನೀವು ಹೈಸ್ಕೂಲಿನಲ್ಲಿ ಓದುತ್ತಿರು ವಿರಲ್ಲವೆ? ಬನ್ನಿ. ಏನೂ ಸಂಕೋಚಪಡಬೇಡಿ. ಹಾಗೆ ಸಂಕೋಚಪಡುವುದಾದರೆ ನಾನೇ ಹೊರಗೆ ಬರುತ್ತೇನೆ." ಎಂದು ಹೇಳಿ ಲಲಿತೆಯ ಕಡೆ ಮುಗುಳ್ನಗೆಯನ್ನು ಬೀರುತ್ತಾ ಹೊರಗೆ ಹೋದನು. ಜಯರಾಮುವು ನಾನಾಭಾವಗಳ ತುಮುಲಜಂಜಡದಿಂದ ನಡುಗುತ್ತಾ ಚಂದ್ರಣ್ಣನ ಕೈಲಿ ಕಾಗದವನ್ನಿಟ್ಟು, "ಇದನ್ನು ನಮ್ಮ ಮಾವನವರು ನಿಮಗೆ ತೋರಿಸಿ ಎಂದು ಬರೆದಿದ್ದಾರೆ. ನೋಡಿದರೆ ಎಲ್ಲವೂ ತಿಳಿ ಯುತ್ತದೆ. ನಿಮ್ಮ ಅಕ್ಕರೆಯ ಸ್ವಾಗತಕ್ಕಾಗಿ ನಾನು ಕೃತಜ್ಞ ನಾಗಿದ್ದೇನೆ. ಈಗ ಕೆಲಸವಿದೆ ಹೋಗುತ್ತೇನೆ. ಸಾಧ್ಯವಾದರೆ ಮತ್ತೆ ತಮ್ಮನ್ನು ನೋಡುತ್ತೇನೆ." ಎಂದು ಹೇಳಿ ಸರಸರನೆ

ಮಹಡಿ ಇಳಿದು ಹೊರಟುಹೋದನು. ಜಯರಾಮುವಿನ ಶೀಘ್ರ ಚಂಚಲ ನಡತೆಯನ್ನು ನೋಡಿ ಚಂದ್ರಣ್ಣನಿಗೆ ಆಶ್ಚರ್ಯವಾಯಿತು. ಆಗ ಚಂದ್ರಣ್ಣನಿಗಾಗಲೇ ಇಪ್ಪತ್ತೊಂದು ವರ್ಷ ವಯಸ್ಸು. ಉನ್ನತಮೂರ್ತಿಯಾಗಿ ಬೆಳೆದು ತನ್ನ ವಯಸ್ಸಿಗಿಂತಲೂ ಮಿಗಿಲಾದ ಗಾಂಭೀರ್ಯದಿಂದ ಕೂಡಿದ್ದನು. ಅವನ ಸರಳತೆಯು ಅಕುಟಿಲವಾಗಿದ್ದರೂ ಅದು ದೊಡ್ಡವರ ಸರಳತೆ. ಆ ಸರಳತೆ ಆ ಗಾಂಭೀರ್ಯಗಳು ಅದು ಇದೋ ಇದು ಅದೋ ಎಂಬಂತೆ ಅಭೇದವಾಗಿ ತೋರುತ್ತಿದ್ದುವು. ಅನೇಕ ವೇಳೆ ಎರಡೂ ಒಂದೇ ಆಗಿ ಅಲೌಕಿಕವಾಗಿ ತೋರುತ್ತಿದ್ದುವು. ಈ ಗುಣಗಳಿಂದ ದಿವ್ಯವಾಗಿ ಶೋಭಿಸುತ್ತಿದ್ದ ಆ ವ್ಯಕ್ತಿತ್ವದ ಮುಂದೆಯಾರಿಗಾದರೂ ಗೌರವವುಂಟಾಗುತ್ತಿತ್ತು. ಪ್ರೀತಿಯೂ ಉಂಟಾಗುತ್ತಿತ್ತು. ಆದುದರಿಂದ ಜಯರಾಮುವಿನ ಧೈರ್ಯವೆಲ್ಲಾ ಆ ವ್ಯಕ್ತಿಯ ಮುಂದೆ ಹೆಡೆ ಮುಚ್ಚಿಬಿಟ್ಟಿತು.

ಜಯರಾಮುವಿನ ಶೀಘ್ರ ಚಂಚಲವಾದ ಮತ್ತು ಸಂಕೋಚ ಅಧೈರ್ಯ ನಾಚಿಕೆಗಳಿಂದ ಮಿಶ್ರಿತವಾದ ನಡತೆಯನ್ನು ನೋಡಿ ಚಂದ್ರಣ್ಣನಿಗೆ ಆಶ್ಚರ್ಯವಾಯಿತು. ಆದರೂ ಆ ಹೊಸ ವ್ಯಕ್ತಿಯನ್ನು ಮಹಡಿಯಿಳಿದು ಬೀದಿಯನ್ನು ಸೇರಿ ಮರೆಯಾಗುವವರೆಗೂ ಚೆನ್ನಾಗಿ ನೋಡಿ ಸಹಾನುಭೂತಿಯ ಮುಗುಳ್ನಗೆಯನ್ನು ಬೀರಿ ನಂತರ ಕೊಠಡಿಯೊಳಗೆ ಹೋದನು. ಲಲಿತೆಯು ಮಂಚದ ಮೇಲಿಂದ ನೆಗೆದು ಇಳಿದು ಬಂದು, “ ಅವರಾರು ಚಂದ್ರಣ್ಣಾ, ಅವರಿಗೇನು ಬೇಕಂತೆ? ” ಎಂದು ಇನ್ನೂ ಬಾಲ್ಯತನದ ಚಂಚಲ ಸುಂದರವಾದ ಕುತೂಹಲದಿಂದ ಕೇಳಿದಳು.

"ಆತನೂ ನಿಮ್ಮ ತರಗತಿಯಲ್ಲೇ ಇದ್ದಾನೆ. ನೀನು ಎಂದೂ ನೋಡಿಲ್ಲವೇ ಲಲಿತಾ?"

"ಆತನನ್ನು ಮಾತ್ರವಲ್ಲ. ಇನ್ನಾವ ಗಂಡುಹುಡುಗರನ್ನೂ ನಾನು ಸರಿಯಾಗಿ ನೋಡಿಲ್ಲ ಚಂದ್ರಣ್ಣಾ."

"ಜಯರಾಂ ಎಂದು ಆತನ ಹೆಸರು. ಒಮ್ಮೆ ವಾಲಿಬಾಲ್ ಪಂದ್ಯದಲ್ಲಿ ಭಾಗವಹಿಸಿದ್ದಾಗ ಆತನ ಹೆಸರೂ ತರಗತಿಗಳೂ ಗೊತ್ತಾದುವು. ವಾಲಿಬಾಲ್ ಆಟವನ್ನು ಚೆನ್ನಾಗಿ ಆಡುತ್ತಾನೆ. ಆತನ ಸಮೀಪದ ಪರಿಚಯ ನನಗೂ ಇಲ್ಲ. ಇದೇನೋ ಒಂದು ಕಾಗದವನ್ನು ಕೊಟ್ಟಿದ್ದಾನೆ. ಓದಿಕೊಳ್ಳಬೇಕಂತೆ. ನೀನೇ ಓದು ಲಲಿತ."

"ನಿನಗೆ ಬಂದ ಕಾಗದಗಳನ್ನು ನಾನು ಓದುವುದಿಲ್ಲ ಚಂದ್ರಣ್ಣಾ. ನಾನು ಓದಬಾರದ ಸಂಗತಿಗಳಿರಬಹುದು ಅದರಲ್ಲಿ. ನೀನೇ ಓದಿ ನನಗೂ ತಿಳಿಸು."

ಚಂದ್ರಣ್ಣನು ಮಂಚದ ಮೇಲೆ ವಿರಾಮವಾಗಿ ದಿಂಬಿಗೊರಗಿ ಕುಳಿತು ಕಾಗದವನ್ನು ಓದಿಕೊಂಡನು. ಕಾಗದವು ಪೂರೈಸುವುದರೊಳಗೆ ಅವನ ಮುಖದ ಕಾಂತಿಯು ಕುಂದತೊಡಗಿತು. ಅವನ ಹೃದಯವೇ ಹಾರಿಹೋದಂತಾಯಿತು. ಮೆಲ್ಲನೆ ಕಾಗದವನ್ನು ತಗ್ಗಿಸಿ ಲಲಿತೆಯ ಕಡೆ ನೋಡಿದನು. ಸಧ್ಯ ಲಲಿತೆಯು ತನ್ನ ಪುಸ್ತಕದಲ್ಲಿಯೇ ತಲ್ಲೀನನೇತ್ರಳಾಗಿ ಚಂದ್ರಣ್ಣನ ಮುಖದ ಭಾವಗಳನ್ನು ನೋಡಿರಲಿಲ್ಲ. ತಕ್ಷಣ ಚಂದ್ರಣ್ಣನ ಪ್ರತಿಭೆಯಲ್ಲಿ ನಾನಾ ಭಾವಗಳು ಮೂಡಿದುವು. ಆ ಕಾಗದದ ವಿಷಯವನ್ನು ಲಲಿತೆಗೆ ಹೇಳೋಣವೇ ಬಿಡೋಣವೇ ಎಂಬುದೇ ಅವನ

ಮುಂದೆ ಎದ್ದು ನಿಂತ ಬೃಹತ್ ಸಮಸ್ಯೆ! ಲಲಿತೆಯ ಹೃದಯವನ್ನು ಚಂದ್ರಣ್ಣನು ಚೆನ್ನಾಗಿ ಅರಿತಿದ್ದನು. ತನಗೂ ಲಲಿತೆಗೂ ಶರೀರಗಳು ಮಾತ್ರ ಬೇರೆ ಪ್ರಾಣವೊಂದೇ ಎಂಬುದನ್ನೂ ತಿಳಿದಿದ್ದನು. ಲಲಿತೆಯು ತನ್ನನ್ನು ಎಷ್ಟರ ಮಟ್ಟಿಗೆ ಒಲಿದಿದ್ದಾಳೆಂಬುದೂ ಅವನಿಗೆ ಪೂರ್ಣವಾಗಿ ವೇದ್ಯವಾಗಿತ್ತು. ಈಗ ಪರೀಕ್ಷೆಯು ಸ್ವಲ್ಪ ದಿನಗಳು ಮಾತ್ರ ಉಳಿದಿತ್ತು. ಕಾಗದದ ವಿಷಯವನ್ನು ಲಲಿತೆಗೆ ತಿಳಿಸಿದರೆ ಅದರಿಂದ ಅವಳು ಅತಿಶಯವಾದ ದುಃಖದಲ್ಲಿ ಬೀಳುವಳೆಂದೂ ಅದರಿಂದ ಪರೀಕ್ಷೆಯಲ್ಲಿ ಅವಳಿಗೆ ತೊಂದರೆಯಾಗುವುದೆಂದೂ ಚಂದ್ರಣ್ಣನು ಭಾವಿಸಿದನು. ಆದರೂ ತಾನು ಕಾಗದದ ವಿಷಯವನ್ನು ಲಲಿತೆಗೆ ಮರೆಮಾಚುತ್ತಿರುವುದು ಅಪರಾಧವೆಂಬ ನೋವಿನಿಂದಲೇ ಆ ಕಾಗದವನ್ನು ಹಾಗೆಯೇ ಮಡಿಸಿ ತನ್ನ ಟ್ರಂಕಿನಲ್ಲಿ ಬಚ್ಚಿಟ್ಟು ಬೀಗ ಹಾಕಿ, "ಏನೂ ಇಲ್ಲ ಲಲಿತ. ಯಾವುದೋ ಸಣ್ಣ ವಿಷಯ. ನಿನಗೇನೂ ಸಂಬಂಧಿಸಿದುದಲ್ಲ." ಎಂದು ಲಲಿತೆಗೆ ಹೇಳಿ ಆಗಿನ ಕಥೆಯನ್ನು ಅಲ್ಲಿಗೆ ಮುಗಿಸಿಬಿಟ್ಟನು.

ಅಂದಿನಿಂದ ಮುಂದೆ ಜಯರಾಮುವು ಮತ್ತೆ ಚಂದ್ರಣ್ಣನನ್ನು ಎಂದೂ ಬಂದು ಕಾಣಲಿಲ್ಲ. ಚಂದ್ರಣ್ಣನೂ ತಾನಾಗಿಯೇ ಅವನನ್ನು ಮಾತಾಡಿಸಲಿಲ್ಲ. ಆದರೆ ತರಗತಿಗಳಲ್ಲಿ ಜಯರಾಮುವು ಲಲಿತೆಯನ್ನು ಯಾರಿಗೂ ಕಾಣದಂತೆ ಕೋಪಮಿಶ್ರಿತವಾದ ಮೋಹದಿಂದ ನೋಡುತ್ತಿದ್ದನು. ಯಾವುದರ ಅರಿವೂ ಇಲ್ಲದ ಲಲಿತೆಯು ತನ್ನ ವ್ಯಾಸಂಗವನ್ನು ಉತ್ಸಾಹದಿಂದಲೇ ಮುಂದುವರಿಸಿದ್ದಳು. ಚಂದ್ರಣ್ಣನಿಗೆ ಶಾಮಯ್ಯನವರ ಕಾಗದವನ್ನು ನೋಡಿದಂದಿನಿಂದ ವ್ಯಾಸಂಗ

ದಲ್ಲಿರಲಿ ತನ್ನ ಜೀವನದಲ್ಲಿಯೇ ಜಿಗುಪ್ಸೆ ನಿರಾಶೆಗಳುಂಟಾಗಿದ್ದುವು. ಆದರೆ ತನ್ನ ಮನೋಭಾವಗಳನ್ನು ಅತಿ ಕಷ್ಟದಿಂದ ಹೊರಗೆಡಹದೆ ವ್ಯಾಸಂಗವನ್ನು ಕುಂಟುಕುಂಟಾಗಿ ಮುಂದುವರಿಸಿದ್ದನು. ಜಯರಾಮುವು ತನ್ನ ವ್ಯಾಸಂಗವನ್ನು ಬಹಳ ಗಾಢವಾಗಿ ಮಾಡುತ್ತಿದ್ದನು. ಆದರೆ ಮನಸ್ಸು ಯಾವಾಗಲೂ ಲಲಿತೆಯನ್ನೇ ನೆನೆಯುತ್ತಿದ್ದುದರಿಂದಲೂ ಮತ್ತು ಅವನ ಹೃದಯದಲ್ಲಿ ಚಂದ್ರಯ್ಯನ ಮೇಲೆ ಅಸೂಯಾಗ್ನಿಯು ಹೊಗೆಯಾಡುತ್ತಿದ್ದುದರಿಂದಲೂ ಪಾಠವೆಲ್ಲೋ ಅವನ ಆಲೋಚನೆಯೆಲ್ಲೋ ಎಂಬಂತಾಗಿತ್ತು. ಅದೂ ಅವನ ಗಮನಕ್ಕೆ ಬಂದು ಎಲ್ಲಿ ಫೇಲಾಗುತ್ತೇನೆಯೋ ಎಂಬ ಭಯದಿಂದ ನಾಲಗೆಯೊಂದನ್ನೇ ನಂಬಿ ಪಾಠಗಳನ್ನು ಉರುಹಚ್ಚಲು ಪ್ರಾರಂಭಿಸಿದನು! ಎಂದು ಮ್ಯಾಟ್ರಿಕ್ ಮುಗಿದೀತು; ಎಂದು ಪರೀಕ್ಷೆಯಲ್ಲಿ ತನಗೆ ಪಾಸಾದೀತು; ಎಂದು ಒಂದು ನೌಕರಿಯನ್ನು ದೊರಕಿಸಿಕೊಂಡೇನು; ಎಂದು ಲಲಿತೆಯನ್ನು ಮದುವೆಯಾಗಿ ಈ ಅನಂತಪುರದಲ್ಲಿಯೇ ಸಂಸಾರವನ್ನು ಸ್ಥಾಪಿಸಿಕೊಂಡೇನು—ಎಂಬುವ ಆತುರದ ಯೋಚನೆಗಳು ಅವನನ್ನು ಸೆರೆಹಿಡಿದುವು. ಶ್ಯಾಮಯ್ಯನವರು ಕಾಗದದಲ್ಲಿ ಹೊರಗೆಡಹಿರುವ ಹೆಚ್ಚಿನ ವಿದ್ಯಾಭ್ಯಾಸದ ಆಶಯವನ್ನೇ ಮರೆತುಬಿಟ್ಟನು. ಮ್ಯಾಟ್ರಿಕ್ ಆದಮೇಲೆ ಮುಂದಕ್ಕೆ ಓದಬೇಕೆಂಬ ಆಕಾಂಕ್ಷೆಯೇ ಜಯರಾಮುವಿನ ಮನಸ್ಸಿನಲ್ಲಿ ಸುಳಿಯಲಿಲ್ಲ.



# ಮೂರನೆಯ ದಳ

## ಗುರುದೇವ

ಗುರುಬ್ರಹ್ಮಾ ಗುರುರ್ವಿಷ್ಣುಃ ಗುರುರೇವ ಮಹೇಶ್ವರಃ ।
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥
ಅಜ್ಞಾನ ತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ ॥

*　*　*　*　*

ಪರಮ ತತ್ವವನರಿತ ಗುರುವನರಸುವುದೆಲ್ಲಿ ? ।
ದೊರೆತಂದು ನೀಂ ಧನ್ಯ—ಮಂಕುತಿಮ್ಮ ॥

—ಡಿ. ವಿ. ಜಿ.

ಚಂದ್ರಣ್ಣನ ಜನ್ಮವು ಪುಣ್ಯಾತ್ಮರಾದ ಮಾತಾಪಿತೃಗಳ ಗರ್ಭದಲ್ಲಿ ಜನಿಸಿತ್ತು. ವಿಶಾಲ ಜಗತ್ತಿನ ಆಡಂಬರದ ಅರಿವು ಆ ಮಾತಾಪಿತೃಗಳಿಗೆ ಅಷ್ಟಾಗಿ ಇರಲಿಲ್ಲವಾದರೂ ಮಾನವ ಪ್ರೇಮ, ಸೌಹಾರ್ದ, ದಯೆ, ದಾನ, ಧರ್ಮ, ತ್ಯಾಗ, ಸಂಯಮ, ಶೀಲ, ಪರರ ಸಂಕಟವನ್ನರಿಯುವ ವಿಶಾಲ ಮನೋಭಾವ-ಇವೇ ಮೊದಲಾದ ಸರ್ವಶ್ರೇಷ್ಠ ದೈವೀಗುಣ ಗಳು ಅವರ ಹೃದಯ ಮಂದಿರದಲ್ಲಿ ಮನೆ ಮಾಡಿಕೊಂಡಿದ್ದುವು. ಇಂಥವರ ಪ್ರೇಮಮಯವಾದ ದಾಂಪತ್ಯದ ಪುಣ್ಯ ಗರ್ಭದಲ್ಲಿ ಜನಿಸಿದ್ದ ಚಂದ್ರಣ್ಣನಲ್ಲಿ ಅವರ ಈ ಸದ್ಗುಣಗಳೆಲ್ಲಾ ಒಡಮೂಡಿದ್ದುವು. ಆತನು ಕವಿಯಂತೆ ರಸಿಕ ಹೃದಯನಾಗಿದ್ದರೂ ಋಷಿಯಂತೆ ಸಂಯಮಿಯಾಗಿದ್ದನು. ಮನ್ಮಥನಂತೆ ಸುಂದರನಾಗಿದ್ದರೂ ಶಿವನಂತೆ ಆತ್ಮವೈಭವ ವುಳ್ಳವನೂ ಆಗಿದ್ದನು. ಇದೆಲ್ಲಕ್ಕಿಂತ ಹೆಚ್ಚಾಗಿ ಅವನ

ಪುರಾಕೃತಪುಣ್ಯದಿಂದ ಅನಂತಪುರದಲ್ಲಿ ಒಬ್ಬ ಸದ್ಗುರುವಿನ ಸನ್ನಿಧಾನವು ಅವನಿಗೆ ದೊರಕಿತ್ತು. ಆ ಸನ್ನಿಧಾನದ ಮಹಿಮೆಯಿಂದ ತರುಣವಿದ್ಯಾರ್ಥಿಯಾದ ಚಂದ್ರಣ್ಣನಲ್ಲಿ ಆದರ್ಶ ಪುರುಷನೊಬ್ಬನು ಅವತಾರವೆತ್ತುತ್ತಿದ್ದನು.

ಚಂದ್ರಣ್ಣ ಲಲಿತೆಯರು ಅನಂತಪುರದಲ್ಲಿ ಯಾರ ಮನೆಯಲ್ಲಿ ಊಟ ವಸತಿ ಮಾಡಿಕೊಂಡಿದ್ದರೋ ಅವರು ಬೇರೆ ಯಾರೂ ಆಗಿರದೆ ಲಲಿತೆಯು ಓದುತ್ತಿದ್ದ ಹೈಸ್ಕೂಲಿನ ಉಪಮುಖ್ಯೋಪಾಧ್ಯಾಯರಾಗಿದ್ದರು. ಜಯರಾಮುವು ಚಂದ್ರಣ್ಣನಿಗೆ ಕಾಗದವನ್ನು ಕೊಡುವ ದಿನ ಅಧ್ಯೈರ್ಯಪಟ್ಟುದಕ್ಕೆ ಆ ಮನೆಯು ತಮ್ಮ ಪ್ರಸಿದ್ಧರಾದ ಉಪಾಧ್ಯಾಯರದಾಗಿದ್ದುದೂ ಒಂದು ಕಾರಣವೇ ನಿಜ. ಆ ವಿದ್ಯಾಗುರುಗಳಿಗೆ ಈಗ ಐವತ್ತೊಂದು ವರ್ಷ ವಯಸ್ಸು. ಅವರು ಕೆಲಸದಿಂದ ವಿಶ್ರಾಂತಿ ಪಡೆಯುವ ಕಾಲವೂ ಸಮೀಪಿಸುತ್ತಿತ್ತು. ಅವರಿಗೆ ಮಕ್ಕಳಿರಲಿಲ್ಲ. ಆದರೂ ಮೊದಲು ಕೈಹಿಡಿದ ಧರ್ಮಪತ್ನಿಯ ಮೇಲೆ ಪುನಃ ಮದುವೆಯಾಗುವ ಆಸೆಯನ್ನು ಅವರು ಇಟ್ಟುಕೊಂಡವರೇ ಅಲ್ಲ. ಜೀವಮಾನವೆಲ್ಲಾ ವಿದ್ಯಾ ಇಲಾಖೆಯಲ್ಲಿಯೇ ಕಳೆದ ಅವರಿಗೆ ವಿದ್ಯಾರ್ಥಿಗಳೇ ಮಕ್ಕಳಾಗಿದ್ದರು. ಪಾಠ ಹೇಳುವುದರಲ್ಲಿ ಅವರನ್ನು ಮೀರಿಸಿದವರು ಇಡೀ ಆ ಜಿಲ್ಲೆಗೆ ಒಬ್ಬಿಬ್ಬರಷ್ಟೆ. ಆದರೆ ಸಾಧುಸ್ವಭಾವದಲ್ಲಿ ಗಾಂಭೀರ್ಯದಲ್ಲಿ ಗುಣದ ಹಿರಿಮೆಯಲ್ಲಿ ಅವರನ್ನು ಮೀರಿಸಿದವರಾರೂ ಇರಲಿಲ್ಲ. ಒಳ್ಳೆಯ ನಡತೆಯ ಹುಡುಗರನ್ನು ಕಂಡರೆ ಅಂಥ ವಿದ್ಯಾರ್ಥಿಗಳನ್ನು ತಮ್ಮ ಮನೆಗೆ ಬರಮಾಡಿಕೊಳ್ಳುವರು. ಪತಿಪತ್ನಿಯರಿಬ್ಬರೂ ಸ್ವಂತ ಮಕ್ಕಳೊಡನೆ ನಲಿದಾಡುವಂತೆ ಅವರೊಡನೆ ನಲಿದಾಡಿ ಅವರಿಗೆ ನಾನಾ ರೀತಿಯ ತಿಂಡಿ

ಗಳನ್ನು ಕೊಟ್ಟು ಕಳುಹಿಸುತ್ತಿದ್ದರು. ಆ ಗುರುವರ್ಯನ ಧರ್ಮಪತ್ನಿಯೂ ಸಹ ಪತಿಯ ಗುಣಗಳನ್ನು ಚಾಚೂ ತಪ್ಪದೆ ಪಡೆದಿದ್ದಳು. ಆ ಗುರುವರ್ಯನು ತನ್ನ ಜೀವಮಾನ ದಲ್ಲಿ ಸುಮಾರು ಹತ್ತು ಹದಿನೈದು ವಿದ್ಯಾಶಾಲೆಗಳಲ್ಲಿ ತನ್ನ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದನು. ಆ ಗುರುವು ಎಲ್ಲಿಗೆ ಹೋದರೂ ವಿದ್ಯಾರ್ಥಿಗಳಿಂದಲೂ ಸಾರ್ವಜನಿಕ ರಿಂದಲೂ ಅವರಿಗೆ ದೊರಕುತ್ತಿದ್ದ ಪ್ರೀತಿ ಗೌರವಗಳು ಬೇರೆ ಮುಖ್ಯೋಪಾಧ್ಯಾಯರಿಗೂ ಮತ್ತು ಡಿ. ಇ. ಒ. ಸಾಹೇಬರು ಗಳಿಗೂ ಸಹ ದೊರಕುತ್ತಿರಲಿಲ್ಲ. ಮುಖ್ಯೋಪಾಧ್ಯಾಯರೂ ಡಿ. ಇ. ಒ. ಸಾಹೇಬರುಗಳೂ ಬರುತ್ತಾರೆ ಹೋಗುತ್ತಾರೆ. ಅವರಲ್ಲಿ ಅಧಿಕಾರ, ಅಧಿಕಾರಕ್ಕೆ ತಕ್ಕ ದರ್ಪ ಮತ್ತು ಯಾವಾಗಲೂ ಆಡಳಿತದ ಯಾಂತ್ರಿಕ ಬುದ್ಧಿ-ಇವಿರುತ್ತವೆ. ಆದರೆ ಅಂತಹ ಅಧಿಕಾರವಿಲ್ಲದಿದ್ದರೂ ವಿದ್ಯಾಶಾಲೆಗಳ, ವಿದ್ಯಾರ್ಥಿಗಳ ಮತ್ತು ತನ್ಮೂಲಕವಾಗಿ ಸಾರ್ವಜನಿಕರ ಜೀವನಾಡಿಗಳನ್ನು ತಮ್ಮ ಪ್ರೇಮದ ಬಾಂಧವ್ಯದಲ್ಲಿ ಕಟ್ಟಿ ಹಾಕಿಕೊಂಡು ಎಲ್ಲರ ಪ್ರೇಮಗೌರವಗಳಿಗೆ ಪಾತ್ರರಾಗಿ ಪೂಜ್ಯತೆಯನ್ನು ಗಳಿಸುವ ಸಾಹಿತ್ಯಹೃದಯರೂ ತತ್ವಜ್ಞಾನಿ ಗಳೂ ಆದ ಉಪ ಮುಖ್ಯೋಪಾಧ್ಯಾಯರುಗಳನ್ನು ನಾವು ಅಲ್ಲಲ್ಲಿ ನೋಡಬಹುದು. ಅದರಲ್ಲೂ ಹೈಸ್ಕೂಲು ಕಾಲೇಜು ಗಳಲ್ಲಿ ಅಂಥವರು ದೊರಕುವುದು ಹೆಚ್ಚು.

ಪ್ರಕೃತ ಚಂದ್ರಣ್ಣನ ಗುರುಗಳು ಇಷ್ಟುಮಾತ್ರರಾ ಗಿರದೆ ಆಧ್ಯಾತ್ಮಿಕ ಸಾಧನೆಯಲ್ಲಿ ಬಹುದೂರ ಹೋಗಿದ್ದ ರೆಂದು ಪ್ರತೀತಿಯಿತ್ತು. ತಮ್ಮ ವಿದ್ಯಾರ್ಥಿದೆಸೆಯುಲ್ಲಿ ಅವರು ಮದ್ರಾಸಿನ ರಾಮಕೃಷ್ಣಾಶ್ರಮದಲ್ಲಿದ್ದರು. ಅಲ್ಲಿ ದೊರಕಿದ

ಕ್ರಮಬದ್ಧವಾದ ಜೀವನವಾತಾವರಣವೂ ಆಗಾಗ್ಗೆ ಬಂದು ಹೋಗುತ್ತಿದ್ದ ಸ್ವಾಮೀಜಿಗಳ ಉಪನ್ಯಾಸ ವ್ಯಕ್ತಿತ್ವಗಳೂ ಎಲ್ಲದಕ್ಕಿಂತ ಹೆಚ್ಚಾಗಿ ಶ್ರೀ ರಾಮಕೃಷ್ಣ ಪರಮಹಂಸರ ಜೀವನ, ಸಾಧನೆ, ಉಪದೇಶಗಳಿಗೆ ಸಂಬಂಧಿಸಿದ ಗ್ರಂಥ ರಾಶಿಯ ಗಾಢವಾದ ವ್ಯಾಸಂಗವೂ ಅವರನ್ನು ಆಧ್ಯಾತ್ಮಿಕ ಪ್ರಪಂಚಕ್ಕೆ ಸ್ವಾಭಾವಿಕವಾಗಿಯೇ ಕೊಂಡೊಯ್ದಿದ್ದುವು. ಅವರು ತಮ್ಮ ಪ್ರಶಂಸೆಯನ್ನು ಎಂದೂ ಸಹಿಸುತ್ತಿರಲಿಲ್ಲ. ತಮ್ಮ ಆಧ್ಯಾತ್ಮಿಕ ಸಾಧನೆಯನ್ನು ಗುಟ್ಟಾಗಿರಿಸಿಕೊಂಡಿದ್ದರೂ ವಿದ್ಯಾರ್ಥಿಗಳ ಮೇಲೆ, ಜನರ ಮೇಲೆ ಅವರು ತೋರುತ್ತಿದ್ದ ಅವ್ಯಾಜ ಮನೋಹರವಾದ ಪ್ರೀತಿವಾತ್ಸಲ್ಯಗಳಲ್ಲಿ ಆ ಆಧ್ಯಾತ್ಮಿಕ ಸಂಪತ್ತಿನ ಆನಂದವು ಹೊರಹೊಮ್ಮುತ್ತಿತ್ತು. ಅವರು ಮನೆಯಲ್ಲಿ ಪ್ರತಿರಾತ್ರಿಯೂ ಸಂಸ್ಕೃತ ರಾಮಾಯಣವನ್ನು ಪಾರಾಯಣ ಮಾಡುತ್ತಿದ್ದರು. ಪ್ರತಿ ಪ್ರಾತಃಕಾಲದಲ್ಲೂ ಭಗವದ್ಗೀತೆಯನ್ನು ಪಾರಾಯಣ ಮಾಡುತ್ತಿದ್ದರು. ಅವರ ಜೀವನಾಡಿಗಳನ್ನು ನಡೆಸುತ್ತಿದ್ದ ಗ್ರಂಥಗಳಲ್ಲಿ ಮುಖ್ಯವೆಂದರೆ ಇವೆರಡೇ. ಮೊದಮೊದಲು ಸಂತಾನಾಪೇಕ್ಷೆಯಿಂದ ತುಂಬ ವ್ರತಗಳನ್ನು ಮಾಡಿದವರಾದರೂ ಇಂದಿನವರೆಗೂ ತಮಗೆ ಮಕ್ಕಳಾಗದಿದ್ದುದಕ್ಕಾಗಿ ಎಂದೂ ವ್ಯಥೆಪಟ್ಟವರಲ್ಲ. ಅವರ ಧರ್ಮಪತ್ನಿಗೂ ನಾನಾ ತತ್ತ್ವಬೋಧೆಗಳಿಂದ ಸಮಾಧಾನ ಹೇಳಿ ಚಿಂತೆಯನ್ನು ಬಿಡಿಸಿದ್ದರು. ಆ ಗುರುಪತ್ನಿಯೂ ಸಹ ಶ್ರೀ ರಾಮಾಯಣವನ್ನು ಸುಶ್ರಾವ್ಯವಾಗಿ ಓದುತ್ತಿದ್ದುದಲ್ಲದೆ ಸಮಂಜಸವಾಗಿ ಅರ್ಥವನ್ನೂ ಮಾಡಿಕೊಳ್ಳುತ್ತಿದ್ದಳು. ಈಚೀಚೆಗೆ ಜಗತ್ತೆಲ್ಲವೂ ಆ ಗುರುದಂಪತಿಗಳೀರ್ವರ ಕಣ್ಣಿಗೆ ಮಕ್ಕಳ

ರಾಜ್ಯವಾಗಿ ತೋರುತ್ತಿತ್ತೆಂದರೆ ಅತಿಶಯೋಕ್ತಿಯಾಗ ಲಾರದು. ಇಂತಹ ಗುರುವರ್ಯನ ಗುಣಮಹಿಮೆಯನ್ನೂ ಪ್ರಸಿದ್ಧಿಯನ್ನೂ ಅರಿತೇ ಶ್ಯಾಮಯ್ಯನವರು ಚಂದ್ರಣ್ಣ ಲಲಿತೆಯರಿಗೆ ಅವರ ಮನೆಯಲ್ಲಿ ಊಟವಸತಿಗಳನ್ನು ಏರ್ಪಡಿ ಸಿದ್ದರು. ವಿದ್ಯಾರ್ಥಿಗಳ ಮೇಲೆ ಅಷ್ಟು ಪ್ರೀತಿವಾತ್ಸಲ್ಯಗಳ ನ್ನಿಟ್ಟಿದ್ದರೂ ಆ ವೃದ್ಧ ದಂಪತಿಗಳು ತಮ್ಮ ಮನೆಯಲ್ಲಿ ಇಲ್ಲಿಯವರೆಗೂ ಯಾವ ವಿದ್ಯಾರ್ಥಿಗಳಿಗೂ ಊಟವಸತಿ ಗಳನ್ನು ಕೊಟ್ಟು ಇಟ್ಟುಕೊಳ್ಳುವ ಗೋಜಿಗೆ ಹೋಗಿರಲಿಲ್ಲ. ಇಟ್ಟುಕೊಳ್ಳಲು ಒಪ್ಪುತ್ತಲೂ ಇರಲಿಲ್ಲ. ಅವರು ಒಂದು ರೀತಿಯಲ್ಲಿ ಜೀವನ್ಮುಕ್ತರಂತೆ ವರ್ತಿಸುತ್ತಿದ್ದರು. ಯಾರ ಸಂಬಂಧವನ್ನೂ ಅತಿ ನಿಕಟವಾಗಿ ಅಂಟಿಸಿಕೊಳ್ಳುತ್ತಿರಲಿಲ್ಲ. ಆದರೆ ಯಾರ ಮೇಲಿನ ವಿಶ್ವಾಸವನ್ನೂ ಕೈಬಿಡುತ್ತಿರಲಿಲ್ಲ. ಆ ಜೀವನ ಕಲೆಯು ಅವರಿಗೆ ಅಭ್ಯಾಸವಾಗಿ ಹೋಗಿತ್ತು. ಅದು ಅವರಿಗೆ ಪರಮಾನಂದದಾಯಕವಾಗಿತ್ತು. ಆದರೆ ಶ್ಯಾಮಯ್ಯನವರು ಚಂದ್ರಲಲಿತೆಯರನ್ನು ತಮ್ಮ ಮನೆಗೆ ಕರೆದು ತಂದ ದಿನ ಸಾತ್ವಿಕತೇಜಸ್ಸಿನಿಂದ ಹೊಳೆಯುತ್ತಿದ್ದ ಆ ಮುದ್ದುಮಕ್ಕಳನ್ನು ನೋಡಿದಾಕ್ಷಣವೇ ಆ ಗುರುವರ್ಯನು ಜನ್ಮಾಂತರದಲ್ಲಿ ತನಗೆ ಜನಿಸಿದ ತನ್ನ ಸ್ವಂತ ಮಕ್ಕಳನ್ನು ಕಂಡಂತೆ ಆನಂದಮೂರ್ತಿಯನ್ನು ತಾಳಿದನು! ಹಾಗೆಯೇ ಆತನ ಧರ್ಮಪತ್ನಿಯೂ ಒಂದು ಅಲೌಕಿಕವಾದ ಆನಂದ ಸಾಗರದಲ್ಲಿ ತೇಲುವಂಥಾ ಅನುಭವವನ್ನು ಕಂಡಳು. ಇವ ರಿಬ್ಬರ ಇಷ್ಟು ಸುದೀರ್ಘವಾದ ಜೀವಿತದಲ್ಲಿಯೇ ಇಷ್ಟು ದಿವ್ಯಸೌಂದರ್ಯದಿಂದ ರಾರಾಜಿಸುವ ಮಕ್ಕಳನ್ನು ನೋಡಿರ ಲಿಲ್ಲ. ಅಂತಹ ತೇಜಸ್ಸು ಅವರ ಕಣ್ಣಿಗೆಲ್ಲಿಯೂ ಬಿದ್ದಿರಲಿಲ್ಲ.

ಅದೆಲ್ಲದಕ್ಕಿಂತಲೂ ಹೆಚ್ಚಾಗಿ ಆ ಮಕ್ಕಳಿಗೆ ಶ್ಯಾಮಯ್ಯ ನವರು ಗುರುಗಳ ಪರಿಚಯ ಮಾಡಿಕೊಟ್ಟಾಕ್ಷಣ ಆ ಮಕ್ಕಳು ಗುರುವಿಗೂ ಗುರುಪತ್ನಿಗೂ ಸಾಷ್ಟಾಂಗವೆರಗಿದ ವಿನಯ ವೆಂಥದು! ಆ ಮಕ್ಕಳ ನಗುಮುಖಗಳಲ್ಲಿ ಅರಳುತ್ತಿದ್ದ ಸದ್ಗುಣಮಂಡಿತವಾದ ಸಾತ್ವಿಕಸೌಜನ್ಯಯುಕ್ತವಾದ ದಿವ್ಯ ಸಂಸ್ಕಾರವೆಂಥದು! ಹೆಚ್ಚು ಹೇಳುವುದೇನು. ಮಕ್ಕಳಿಲ್ಲದ ಗುರುವೂ ಗುರುಪತ್ನಿಯೂ ತಮ್ಮ ಇಷ್ಟು ದಿನಗಳ ತಪಸ್ಸಿಗೆ ಪರಮಾತ್ಮನು ಮೆಚ್ಚಿ ತಾನೇ ಆ ಗಂಡುಹೆಣ್ಣುಗಳ ರೂಪ ದಲ್ಲಿ ತಮ್ಮ ವಾತ್ಸಲ್ಯದ ಮಡಿಲಲ್ಲಿ ಲೀಲೆಯಾಡಿ ಹೋಗಲು ಬಂದಿದ್ದಾನೆಂದು ಭಾವಿಸಿ ತಮ್ಮ ಬರಡು ಬಾಳು ಇಂದಿಗೆ ಸಾರ್ಥಕವಾಯಿತೆಂದು ಧನ್ಯಮನಸ್ಕರಾಗಿ ಆನಂದಾಶ್ರು ಗಳನ್ನು ಸುರಿಸಿದರು. ಇನ್ನು ಶ್ಯಾಮಯ್ಯನವರು ಕಷ್ಟಪಡು ವುದೇನಿದೆ? ಅವರ ಬಯಕೆಯನ್ನು ತಿಳಿದಾಕ್ಷಣ ಗುರುವೂ ಗುರುಪತ್ನಿಯೂ ತಾವೇ ಸಫಲಗೊಂಡವರಂತೆ ಕೃತಜ್ಞತಾ ಭಾವದಿಂದ ಒಪ್ಪಿಕೊಂಡರು. ಮರುನಿಮಿಷದಲ್ಲಿ ಚಂದ್ರ ಣ್ಣನು ಗುರುವಿನ ಆಲಿಂಗನದಲ್ಲಿಯೂ ಲಲಿತೆಯು ಗುರು ಪತ್ನಿಯ ಆಲಿಂಗನದಲ್ಲಿಯೂ ಒಂದಾಗಿದ್ದರು! ಅದೊಂದು ಅವ್ಯಾಜವಾದ ದಿವ್ಯಪ್ರೇಮದ ರಸಮಯ ಸನ್ನಿವೇಶ. ಇಂತಹ ಸನ್ನಿವೇಶದ ಮುಂದೆ ಯಾವ ಜಾತಿಭೇದವು ನಿಂತೀತು? ಯಾವ ಕಟ್ಟುಕಟ್ಟಳೆಗಳು ನಿಂತಾವು?

ಚಂದ್ರಣ್ಣ ಲಲಿತೆಯರು ಆ ಗುರುದಂಪತಿಗಳ ಮನೆ ಯನ್ನು ಸೇರಿದ್ದೇ ತಡ, ಅವರ ವಾತ್ಸಲ್ಯದ ಅರಗಿಳಿಗಳಾ ದರು. ಅವರ ಆನಂದದ ಹೃನ್ಮಣಿಗಳಾದರು. ಲಲಿತೆಯ ನ್ನಂತೂ ಆ ಸಂತಾನರಹಿತಳಾದ ವೃದ್ಧಮಾತೆಯು ಹೊಟ್ಟೆ

ಯ ಮಗಳಿಗಿಂತ ಹೆಚ್ಚಾಗಿ ಮುದ್ದಿಸುತ್ತಿದ್ದಳು. ಆ ವೃದ್ಧ ಗುರುಪಿತೃವಿಗೆ ಚಂದ್ರಣ್ಣನು ಸರ್ವ ರೀತಿಯಲ್ಲೂ ಆದರ್ಶ ವಿದ್ಯಾರ್ಥಿಯಾಗಿದ್ದನು. ಇನ್ನೂ ಆದರ್ಶನಾಗಬೇಕೆಂಬ ಉತ್ಕಟಾಕಾಂಕ್ಷೆಯಿಂದ ಆತನ ಆಧ್ಯಾತ್ಮ ಶಿಕ್ಷಣಕ್ಕೂ ತೊಡಗಿದನು. ಅದೊಂದು ಪರಸ್ಪರ ಆತ್ಮವಿಕಾಸಕಾರ್ಯವಾಗಿತ್ತೆಂದರೆ ಸೋಜಿಗವೇನಲ್ಲ. ಮಹಾಕವಿಯು ತನ್ನ ಮಹಾಕಾವ್ಯವನ್ನು ಸೃಷ್ಟಿಸುತ್ತಾ ತಾನೂ ಸೃಷ್ಟಿತನಾಗುತ್ತಿರುತ್ತಾನೆ. ಹಾಗೆಯೇ ಸ್ವಂತ ಸಂತಾನವಿಲ್ಲದ ಆ ಗುರುವೃದ್ಧನು ಎಷ್ಟೇ ಸಂಯಮ ಸಮಾಧಾನಚಿತ್ತನಾಗಿದ್ದುಕೊಂಡು ಲೋಕದ ಮಕ್ಕಳೇ ತನ್ನ ಮಕ್ಕಳೆಂದುಕೊಂಡಿದ್ದರೂ ಆ ದಯಾಮಯವಾದ ಹೃದಯದಲ್ಲಿ ಪೂರ್ತಿಯಾಗಿ ತೊಡೆಯಲಸಾಧ್ಯವಾದ ಕೊರಗೊಂದು ಇದ್ದೇ ಇತ್ತು. ಭಕ್ತಶ್ರೇಷ್ಠನು ಎಷ್ಟೇ ಜ್ಞಾನಿಯಾದರೂ ಇಷ್ಟದೇವತಾದರ್ಶನವಾಗುವವರೆಗೂ ಸಮಾಧಾನಚಿತ್ತನಾಗುವುದಿಲ್ಲವಲ್ಲವೇ? ಹಾಗೆಯೇ ಲೋಕದ ಮಕ್ಕಳ ಮೇಲೆ ಅವ್ಯಕ್ತವಾಗಿ ಅರೂಪವಾಗಿ ಅನಾಸಕ್ತವಾಗಿ ವಿಹರಿಸುತ್ತಿದ್ದ ಆ ಗುರುಪಿತೃವಿನ ಪುತ್ರವಾತ್ಸಲ್ಯವು ಚಂದ್ರಣ್ಣನಲ್ಲಿ ವ್ಯಕ್ತವಾಗಿ ಸಾಕಾರವಾಗಿ ಪರಮ ಸುಂದರವಾಗಿ ಪ್ರೇಮಮಯವಾಗಿ ಸ್ಥಾಯಿತ್ವವನ್ನು ಪಡೆಯಿತು. ರಾತ್ರಿಯ ವೇಳೆ ಚಂದ್ರಣ್ಣ ಲಲಿತೆಯರಿಬ್ಬರಿಗೂ ಒಂದು ಗಂಟೆಯ ಕಾಲ ಪಾಠವನ್ನು ಹೇಳಿಕೊಟ್ಟ ನಂತರ ಚಂದ್ರಣ್ಣನೊಬ್ಬನನ್ನೇ ತನ್ನ ಕೋಣೆಯಲ್ಲಿ ಒಂಟಿಯಾಗಿ ಕೂಡಿಸಿಕೊಂಡು ಶ್ರೀರಾಮ, ಶ್ರೀಕೃಷ್ಣ, ಭಗವಾನ್ ಬುದ್ಧ, ಶ್ರೀ ಶಂಕರಾಚಾರ್ಯ, ಶ್ರೀರಾಮಕೃಷ್ಣ ಪರಮಹಂಸ, ಶ್ರೀ ವಿವೇಕಾನಂದ, ಮಹಾತ್ಮ ಗಾಂಧಿ–ಇವರೇ ಮುಂತಾದ ಭವ್ಯಾತ್ಮರ ಜೀವನಚಿತ್ರಗಳನ್ನು

ತಮ್ಮದೇ ಆದ ರಸಶೈಲಿಯಲ್ಲಿ ವರ್ಣಿಸಿ ಹೇಳಿ ಅವರ ಜೀವನಗಳ ದಿವ್ಯಸಂದೇಶಗಳನ್ನು ಬೋಧಿಸುತ್ತಿದ್ದನು. ಆ ರೀತಿ ಬೋಧಿಸುವುದರಲ್ಲಿ ಆ ವೃದ್ಧ ಗುರುವರ್ಯನ ವಾಕ್‌ಶಕ್ತಿ, ಸ್ಫೂರ್ತಿ, ಉತ್ಸಾಹಗಳು ಈಗಾಗಲೇ ಕಾಲೇಜು ತರುಣನಾಗಿದ್ದ ಚಂದ್ರಣ್ಣನಿಗೇ ಆಶ್ಚರ್ಯವನ್ನುಂಟುಮಾಡುತ್ತಿದ್ದುವು. ಎಲ್ಲದಕ್ಕಿಂತ ಹೆಚ್ಚಾಗಿ ಆ ಗುರುವರ್ಯನು ವರ್ತಮಾನಕಾಲದ ಭಾರತದ ರಾಜಕೀಯ, ಆರ್ಥಿಕ, ಸಾಮಾಜಿಕಸ್ಥಿತಿಗತಿಗಳನ್ನು ವರ್ಣಿಸುವುದರಲ್ಲಿ ಆವೇಶಪೂರ್ಣವಾದ ಆಸಕ್ತಿಯನ್ನು ವಹಿಸುತ್ತಿದ್ದನು. ಮಹಾತ್ಮಾ ಗಾಂಧೀಜಿಯವರ ಅಹಿಂಸಾತ್ಮಕ ಹೋರಾಟದ ರಾಜಕೀಯ ರೂಪ, ಆರ್ಥಿಕರೂಪ, ಸಾಮಾಜಿಕ ರೂಪ, ನಿರ್ಮಾಣಕಾರ್ಯರೂಪ, ನೈತಿಕ ಮತ್ತು ಧಾರ್ಮಿಕ ರೂಪ ಮತ್ತು ಆಧ್ಯಾತ್ಮಿಕರೂಪ—ಇವುಗಳನ್ನೆಲ್ಲಾ ವರ್ಣಿಸಿ ತಾನೇ ತನ್ನ ಭಾಷಣದಿಂದ ಏನೋ ಒಂದು ರೀತಿಯ ಅಲೌಕಿಕವಾದ ತೃಪ್ತಿಯನ್ನು ಹೊಂದುತ್ತಿದ್ದನು! ನಮ್ಮ ಭಾರತ ದೇಶದ ಹಳ್ಳಿಗಾಡುಗಳ ಹೀನಸ್ಥಿತಿ ಅಜ್ಞಾನ ದಾರಿದ್ರ್ಯಗಳನ್ನು ವರ್ಣಿಸುವಾಗ ಅವುಗಳ ನಿವಾರಣೆಗಾಗಿ ಮಹಾತ್ಮರು ಪಡುತ್ತಿರುವ ಸಾಹಸ-ಸಂಕಟಗಳನ್ನು ಎತ್ತಿ ಆಡುವಾಗ ಆ ಗುರುವೃದ್ಧನ ಕಣ್ಣಲ್ಲಿ ನೀರೂರುತ್ತಿತ್ತು! ದೇಶಸೇವೆಯೇ ಈಶಸೇವೆಯೆಂದು ನೂರಾರು ಉದಾಹರಣೆಗಳ ಮೂಲಕ ಚಂದ್ರಣ್ಣನಿಗೆ ಬೋಧಿಸುತ್ತಿದ್ದನು. ಆದರೆ ಬರೀ ಸೇವಾಸ್ಫೂರ್ತಿಯಿಂದ ಮುಂಗಾಣದೆ ಒಣಹುರುಪು ಉತ್ಸಾಹಗಳಲ್ಲಿ ತಮ್ಮ ದೈಹಿಕ ಮಾನಸಿಕ ಶಕ್ತಿಗಳನ್ನು ವ್ಯರ್ಥ ಶೋಷಣೆ ಮಾಡಿಕೊಳ್ಳಬಾರದೆಂಬುದಕ್ಕೆ ತೀಕ್ಷ್ಣವಾದ ಎಚ್ಚರಿಕೆಗಳನ್ನು ಕೊಡುತ್ತಿದ್ದನು. ಎಲ್ಲಾ ಕಾರ್ಯಗ

ಳಲ್ಲೂ ಆ ಗುರುವೃದ್ಧನಿಗೆ ಭಗವದ್ಗೀತೆಯೇ ಆದರ್ಶ ಮಾರ್ಗ ದರ್ಶಕ ಗ್ರಂಥವಾಗಿತ್ತು : "ಕರ್ತವ್ಯಗಳನ್ನು ಸೋಮಾರಿ ತನವಿಲ್ಲದ ಚುರುಕಿನಿಂದಲೂ ನಿರ್ವಂಚನೆಯಿಂದಲೂ ಮಾಡ ಬೇಕು. ಆದರೆ ಫಲಾಫಲಗಳ ಮೇಲೆ ದೃಷ್ಟಿ ಇಡಬಾರದು. ಸರ್ವದಾ ತಾನು ಮಾಡುವ ಕಾರ್ಯಗಳೆಲ್ಲಾ ಸೃಷ್ಟಿಕರ್ತನ ಪ್ರೀತ್ಯರ್ಥವಾಗಿ ಮಾಡುವ ಆತ್ಮಯಜ್ಞ ಕಾರ್ಯಗಳೆಂದು ಭಾವಿ ಸಬೇಕು; ನಂಬಬೇಕು. ಇಂತಹ ತಪೋಮಯವಾದ ಸೇವೆ ಯಿಂದಲೇ ತನಗೂ ತಾನು ಯಾರಿಗೆ ಸೇವೆ ಮಾಡುತ್ತಿರು ವನೋ ಅವರಿಗೂ ಪೂರ್ಣ ಪ್ರಯೋಜನವೂ ಸಕಲ ರೀತಿಯ ಕಲ್ಯಾಣ ಆನಂದಗಳೂ ಉಂಟಾಗುತ್ತವೆ." ಭಗವದ್ಗೀತೆಯ ಸಾರಸದೃಶವಾದ ಆ ರೀತಿಯ ಬೋಧೆಯನ್ನು ಆ ವೃದ್ಧ ಗುರುವು ಚಂದ್ರಣ್ಣನಿಗೆ ದಿನಕ್ಕೊಂದು ಬಾರಿಯಾದರೂ ಹೇಳದೆ ಇರುತ್ತಿರಲಿಲ್ಲ. ವಿನಯದಿಂದಲೂ ಭಕ್ತಿಯಿಂದಲೂ ಪ್ರೀತಿಯಿಂದಲೂ ಆನಂದಾಶ್ರುಪೂರಿತನಾಗಿ ತಮ್ಮ ಬೋಧನೆ ಯನ್ನು ಕೇಳುತ್ತಿದ್ದ ಚಂದ್ರಣ್ಣನನ್ನು ಮಲಗುವ ಹೊತ್ತಾಗು ತ್ತಲೆ ಗುರುಪಿತೃವು, "ಚಂದ್ರೂ, ಲಲಿತೆಯು ನಿನ್ನ ಭಾವೀ ಭಾರ್ಯೆಯಾಗುವ ಸುಯೋಗ ಒದಗಿದರೂ—ಅಂತಹ ಸುಯೋಗ ಒದಗಲೆಂಬುದೇ ನನ್ನ ಹೃತ್ಪೂರ್ವಕವಾದ ಹಾರೈಕೆ—ಸದಾ ನಿನ್ನ ಬೆನ್ನಂಟಿ ಬಂದ ತಂಗಿಯಂತೆ ಭಾವಿಸಿ ಕೊಂಡು ಶರೀರದ ಮೋಹವನ್ನು ಬಿಟ್ಟು ಆತ್ಮರತಿಯನ್ನು ಬೆಳೆಸಿಕೋ ಮಗು. ಅಂತಹ ಆತ್ಮರತಿಯನ್ನು ಪಡೆದ ದಂಪತಿ ಗಳಲ್ಲವೇ ಧನ್ಯರು! ಅಂತಹವರ ಬಾಳಿನಲ್ಲಿ ಒಡಕು ಸಿಡುಕು ಗಳೇಕೆ ಬಂದಾವು? ಸಂಸಾರ ಸಮುದ್ರದಲ್ಲಿ ವಿಷಾದವೇಕೆ ಹುಟ್ಟೀತು? ಎಂತಹ ಕಷ್ಟವೂ ಅವರನ್ನು ಏಕೆ ನೋಯಿ

ಸೀತು ? ” ಎಂದು ಬುದ್ಧಿವಾದವನ್ನು ಹೇಳಿಕಳಿಸುತ್ತಿದ್ದರು. ಹೀಗೆ ಚಂದ್ರಣ್ಣನಿಗೆ ಇತ್ತ ಕಡೆ ಧರ್ಮಬೋಧೆಯು ಪೂರೈಸುವವರೆಗೂ ಅತ್ತ ಕಡೆ ಗುರುಪತ್ನಿಯು ಲಲಿತೆಗೆ ನಾನಾ ಪುರಾಣ ಪುಣ್ಯಕಥೆಗಳನ್ನು ಹೇಳುತ್ತಾ ಸರಸವಿನೋದವಾದ ಸಂಭಾಷಣೆಯಲ್ಲಿ ತೊಡಗುತ್ತಿದ್ದಳು. ಸೀತೆ, ಸಾವಿತ್ರಿ, ಅನಸೂಯೆ, ದಮಯಂತಿ—ಮುಂತಾದ ಪತಿವ್ರತಾ ಶಿರೋಮಣಿಗಳ ಜೀವನಸಂದೇಶಗಳನ್ನೂ ಜ್ಞಾನಿಗಳೂ ಭಕ್ತೆಯರೂ ಆದ ಮೈತ್ರೇಯಿ, ಶಬರಿ, ದ್ರೌಪದಿ, ಮೀರಾಬಾಯಿ—ಮುಂತಾದ ನಾರೀಮಣಿಗಳ ಜೀವನಸಂದೇಶಗಳನ್ನೂ ಮತ್ತೆ ಮತ್ತೆ ಅಕ್ಕರೆಯಿಂದ ಹೇಳುವುದರಲ್ಲಿ, ಚರ್ಚಿಸುವುದರಲ್ಲಿ, ವರ್ತಮಾನಕಾಲದ ಸ್ತ್ರೀಸಮಾಜದ ಕುಂದುಕೊರತೆಗಳನ್ನು ಅವುಗಳಿಗೆ ಹೋಲಿಸಿ ಅವುಗಳ ದಿವ್ಯತ್ವವನ್ನು ಪ್ರತಿಪಾದಿಸುವುದರಲ್ಲಿ ಗುರುಪತ್ನಿಯು ತೀವ್ರಾಸಕ್ತಿಯನ್ನು ವಹಿಸುತ್ತಿದ್ದಳು. ಬೇಸರವಾದಾಗ ದೇವರಮನೆಯಲ್ಲಿ ಕುಳಿತು ದೇವರ ಮೇಲಿನ ನೂರಾರು ಸ್ತೋತ್ರಗಳನ್ನೂ ಹಾಡುಗಳನ್ನೂ ಹಾಡಿ ಲಲಿತೆಗೂ ಹಾಡುವುದನ್ನು ಕಲಿಸುತ್ತಿದ್ದಳು. ಹೀಗೆ ಪ್ರತಿದಿನವೂ ದಿವ್ಯಗುರುವ್ಯಕ್ತಿಗಳ ದಿವ್ಯಸನ್ನಿಧಿಯಲ್ಲಿ ದಿವ್ಯಸಂದೇಶಗಳಿಂದ ದೀಪ್ತರಾಗಿ ಚಂದ್ರಲಲಿತೆಯರು ಆ ದಯಾಮಯರಾದ ಮಾತಾಪಿತೃಗಳ ಪಾದಗಳಿಗೆ ತಮ್ಮ ಹಣೆಗಳನ್ನು ಮಣಿದು ತಮ್ಮ ಮಹಡಿಯ ಕೋಣೆಗೆ ಹೋಗಿ ಮಲಗುತ್ತಿದ್ದರು.

ಇಂತಹ ಮಹಾಗುರುವಿನ ಪುಣ್ಯಸಹವಾಸ ಮತ್ತು ದಿವ್ಯಸನ್ನಿಧಿಗಳಿಂದ ಚಂದ್ರಣ್ಣನ ಸಂಯಮಶಕ್ತಿಯು ಅವನ ವಯಸ್ಸಿನೊಡನೆ ದಿನೇ ದಿನೇ ವೃದ್ಧಿಯಾಗುತ್ತಾ ಪರ್ವತವಂತೆ ದೃಢವಾಗುತ್ತಿತ್ತು. ಅದು ದೃಢವಾದಷ್ಟೂ ಆತನ

ಆತ್ಮದಲ್ಲಿ ಲಲಿತೆಯ ಮೇಲೆ ಏನೋ ಒಂದು ರೀತಿಯ ಅಲೌಕಿಕವೂ ಧರ್ಮದೃಢವೂ ಆದ ಪ್ರೇಮವು ಗಾಢವಾಗಿ ಬೆಳೆಯುತ್ತಿತ್ತು.

ಈ ರೀತಿಯಾದ ಆತ್ಮದೃಢತೆಯನ್ನು ಈ ಇಪ್ಪತ್ತೊಂದರ ಚಿಕ್ಕ ತಾರುಣ್ಯದಲ್ಲಿಯೇ ಚಂದ್ರಣ್ಣನು ಸಂಪಾದಿಸಿದ್ದುದರಿಂದಲೇ ಶ್ಯಾಮಯ್ಯನವರ ತ್ಯಾಗವನ್ನು ನೋಡಿ ಅವನಿಗೆ ಜೀವನದಲ್ಲಿಯೇ ನಿರಾಶೆ ಜಿಗುಪ್ಸೆಗಳುಂಟಾಗಿದ್ದರೂ ಸಹಿಸಿಕೊಂಡು ಸಕಲವನ್ನೂ ದೈವದ ಮೇಲೆ ಹಾಕಿ ಹಾಗೂ ಹೀಗೂ ತನ್ನ ಎಂಟ್ರೆನ್ಸ್ ಪರೀಕ್ಷೆಯನ್ನು ಪೂರೈಸಿದನು. ಪರೀಕ್ಷೆಯಾದ ನಂತರ ತನ್ನ ಗುರುವಿನ ಅಪ್ಪಣೆಯನ್ನು ಪಡೆದು ಲಲಿತೆಯನ್ನು ಕರೆದುಕೊಂಡು ಕಲ್ಯಾಣದುರ್ಗಕ್ಕೆ ಹೋಗುವ ಬಸ್ಸಿನಲ್ಲಿ ಗೌರೀಹಳ್ಳಿಗೆ ಹೋಗಿ ಸೇರಿದನು. ಆ ವರ್ಷದ ಪರೀಕ್ಷೆಯಲ್ಲಿ ಲಲಿತೆಯು ಪ್ರಥಮ ದರ್ಜೆಯಲ್ಲಿ ಪಾಸಾದಳು. ಚಂದ್ರಣ್ಣನು ಸಾಮಾನ್ಯ ದರ್ಜೆಯಲ್ಲಿ ಪಾಸಾದನು. ಜಯರಾಮುವು ಇ.ಪಿ.ಎಸ್. ಮಾತ್ರ ಆಗಿ ಮುಂದಿನ ವಿದ್ಯಾಭ್ಯಾಸಕ್ಕೆ ತಾನು ಇಷ್ಟಪಟ್ಟಂತೆಯೇ ದಾರಿಯನ್ನು ಮುಚ್ಚಿಕೊಂಡನು.



# ನಾಲ್ಕನೆಯ ದಳ

## ಮಮತೆಯ ಸುಳಿ

.............ಸೀತಾರಾಮರಿರಲಿಂತು
ಸೊಗದ ಪಾಲ್ ಜೇನಿನೊಳ್ ತೇಲ್ದು ಬಾಳ್‌ದೋಣಿಯಂ,
ಭೋಂಕನೆಯೆ ಮಂಥರೆಯ ಮಮತೆಯ ಸುಳಿಗೆ ಸಿಲ್ಕಿ
ರಸದೋಡಮುಳ್ದುದಯ್..................

—ಕುವೆಂಪು.

ಓರೊರ್‍ವನಿಚ್ಛೆಗುಣವೊಂದೊಂದು ಬಗೆ ಜಗದಿ ।
ಭಾರಮೋರೋರ್‍ವನಿಂಗೊಂದೊಂದು ತೆರದಿ ॥
ದಾರಗಳಿನವರ ವಿಧಿ ಪಿಡಿದು ಕುಣಿದಾಡಿಸಲು ।
ನೂರುಜಡೆಕೋಲಾಟ—ಮಂಕುತಿಮ್ಮ ॥

—ಡಿ. ವಿ. ಜಿ.

ಗೌರಮ್ಮ ಶಾಮಯ್ಯನವರಿಬ್ಬರೂ ಇಷ್ಟಪಟ್ಟಂತೆ ಲಲಿತೆಯ ವಿದ್ಯಾಭ್ಯಾಸವು ನಿಂತಿತು. ಚಂದ್ರಣ್ಣನು ಅನಂತಪುರದ ಕಾಲೇಜಿನಲ್ಲಿಯೇ ಬಿ. ಎ. ಕೋರ್ಸನ್ನು ಓದಲು ನಿರ್ಧರಿಸಿದನು. ರಜಾ ಪೂರೈಸಿದ ಮೇಲೆ ಮತ್ತೆ ಅನಂತಪುರಕ್ಕೆ ಹೋಗಿ ತನ್ನ ಒಲುಮೆಯ ಗುರುಗಳ ಮನೆಯಲ್ಲಿಯೇ ನಿಂತು ತನ್ನ ಪ್ರೌಢವ್ಯಾಸಂಗವನ್ನು ಪ್ರಾರಂಭಿಸಿದನು. ಅತ್ತ ಜಯರಾಮುವು ಗುಮಾಸ್ತಗಿರಿಯ ಬೇಟೆಗೆ ನಿಂತನು. ಅದು ಬೇಗ ಸಿಕ್ಕುವಂತೆ ಕಾಣಲಿಲ್ಲವಾಗಿ ಸಿಕ್ಕುವವರೆಗೂ ಶೀಘ್ರಲಿಪಿ ಮತ್ತು ಬೆರಳೊತ್ತಿನ ಮುದ್ರಣವೆರಡನ್ನೂ ಅಭ್ಯಾಸ ಮಾಡಹತ್ತಿದನು. ಜಯರಾಮುವು ತನ್ನ ತಾಯಿ ಗಳಿಸಿ ಕೊಟ್ಟಿದ್ದ ಸ್ವಲ್ಪ ಹಣವನ್ನು ಅಂಚೆಯಿಲಾಖೆಯ ಸೇವಿಂಗ್ಸ್

ಬ್ಯಾಂಕಿನಲ್ಲಿಟ್ಟಿದ್ದನು. ಊಟ ವಸತಿಗಳನ್ನು ಮೊದಲಿದ್ದಲ್ಲಿಯೇ ಜರುಗಿಸುತ್ತಿದ್ದನು. ಫೀಜು ವಗೈರೆ ಖರ್ಚುಗಳಿಗೆ ಶ್ಯಾಮಯ್ಯನವರು ಅಷ್ಟು ಇಷ್ಟನ್ನು ಕಳಿಸುತ್ತಿದ್ದರು. ಈ ಸಾರಿ ಜಯರಾಮುವಿಗೆ ಒಂದು ಮಹಾ ಸಮಾಧಾನವೆಂದರೆ ಚಂದ್ರಣ್ಣನ ಜೊತೆಯಲ್ಲಿ ಲಲಿತೆಯಿಲ್ಲದೆ ಇದ್ದುದು. ಸಧ್ಯ ತನ್ನ ಭಾವೀ ಭಾರ್ಯೆಯು ತನಗೆ ಉದ್ಯೋಗವೊಂದು ದೊರಕುವವರೆಗೂ ತೆಪ್ಪನೆ ಅವಳ ತಂದೆಯ ಜೊತೆಯಲ್ಲಿದ್ದರೆ ಸಾಕು ಎಂದುಕೊಂಡನು. ತನಗೆ ನೌಕರಿ ದೊರಕುವುದೇ ತಡ ತಾನೇ ಹೋಗಿ ಶ್ಯಾಮಯ್ಯಮಾವನನ್ನು ಕೇಳಿ ಲಲಿತೆಯನ್ನು ಆದಷ್ಟು ಬೇಗ ಮದುವೆಮಾಡಿಕೊಡುವಂತೆ ಮಾಡಬೇಕೆಂದು ನಿರ್ಧರಿಸಿಕೊಂಡಿದ್ದನು.

ಚಂದ್ರಣ್ಣನನ್ನು ಐದುವರ್ಷದ ಹುಡುಗಿಯಾದಂದಿನಿಂದ ತನ್ನ ಜೀವಮಾನದಲ್ಲಿ ಇಲ್ಲಿಯವರೆಗೂ ಎಂದೂ ಅಗಲದೆ ಇದ್ದ ಲಲಿತೆಯು ಈಗ ಅಗಲಿರುವುದು ಬಹಳ ದುಸ್ಸಹವಾಗಿತ್ತು. ಆಗಲೇ ಹನ್ನೊಂದರಲ್ಲಿ ಕಾಲಿಡುತ್ತಿದ್ದ ಚೆನ್ನಯ್ಯನ ಮಗಳು ಶಾರದೆಯು ಜೊತೆಗಿಲ್ಲದೆ ಹೋಗಿದ್ದರೆ ಲಲಿತೆಯ ಪಾಡು ಶೋಚನೀಯವಾಗುತ್ತಿತ್ತು. ಊಟತಿಂಡಿಗಳೆಲ್ಲಾ ಗೌರಮ್ಮನವರ ಮನೆಯಲ್ಲಿಯೇ ಮೊದಲಿಂದಲೂ ನಡೆಯುತ್ತಿದ್ದುದರಿಂದ ತಂದೆಗೂ ತನಗೂ ಅಡಿಗೆ ಮಾಡಿಕೊಳ್ಳುವ ತಾಪತ್ರಯವೂ ಲಲಿತೆಗಿರಲಿಲ್ಲ. ಹೆಚ್ಚು ಎಂದರೆ ಬೆಳಗ್ಗೆ ತಂದೆಗೂ ತನಗೂ ತಾವಿದ್ದ ಮನೆಯಲ್ಲಿ ಸ್ನಾನಕ್ಕೆ ನೀರು ಕಾಯಿಸುವುದೊಂದು ಕೆಲಸವಿತ್ತು. ತಂದೆಯ ಸ್ನಾನ ಮೊದಲಾಗುವುದು. ನಂತರ ದೇವರ ಪೂಜೆಗೋಸ್ಕರ ತಂದೆಯು ಹೂಗಳನ್ನು ತರಲು ತೋಟದ ಹತ್ತಿರ ಹೋಗುವರು. ಆಗ ಲಲಿ

ತೆಯ ಸ್ನಾನವೂ ಪೂರೈಸುವುದು. ತಂದೆ ಹೂಗಳನ್ನು ತಂದು ದೇವರ ಕೋಣೆಯಲ್ಲಿ ಪೂಜೆಗೆ ಪ್ರಾರಂಭಿಸುವರು. ಆಗ ಲಲಿತೆಯು ತಾನೂ ತಂದೆಯೊಡನಿದ್ದು ದೇವರ ಮುಂದೆ ಕೂಡುವಳು. ತಂದೆಯು ಪೂಜೆ ಪ್ರಾರ್ಥನೆಗಳನ್ನು ಮುಗಿಸಿ ಪ್ರಸಾದವನ್ನು ನೀಡಿ ಹೊರಗೆ ಹೊರಟರೆ ಲಲಿತೆಯು ದೇವರ ಮುಂದೆ ಕುಳಿತು ತಾನು ಗುರುಪತ್ನಿಯಿಂದ ಕಲಿತಿದ್ದ ಸ್ತೋತ್ರಗಳನ್ನೂ ಹಾಡುಗಳನ್ನೂ ಹಾಡಿಕೊಳ್ಳುವಳು. ಒಮ್ಮೊಮ್ಮೆ ಶಾರದೆ ಗೌರಮ್ಮನವರೂ ಆ ಸಮಯದಲ್ಲಿ ಅಲ್ಲಿಗೆ ಬರುವುದುಂಟು. ಅವರ ಮುಂದೆ ತನ್ನ ಹಾಡುಗಳನ್ನು ಹಾಡುವುದೆಂದರೆ ಲಲಿತೆಗೆ ತುಂಬಾ ಪ್ರೀತಿ. ಇನ್ನು ಉಳಿದ ಸಮಯಗಳಲ್ಲಿ ಶಾರದೆಯೊಡನೆ ತೋಟಕ್ಕೆ ಹೋಗುವುದು, ಹೂ ಬಿಡಿಸುವುದು, ಮಾಲೆ ಕಟ್ಟುವುದು, ಶಾರದೆಯ ತಲೆ ಬಾಚುವುದು, ಅವಳಿಂದ ತಾನೂ ಬಾಚಿಸಿಕೊಳ್ಳುವುದು, ಹೂ ಮುಡಿಯುವುದು, ಬೇಸರವಾದಾಗ ತನ್ನ ಪುಸ್ತಕಗಳನ್ನು ಓದುವುದು, ಒಮ್ಮೊಮ್ಮೆ ಪುರಾಣಪುಣ್ಯಕಥೆಗಳನ್ನು ಗೌರಮ್ಮನವರ ಮುಂದೆಯೂ ಓದುವುದು, ಒಮ್ಮೊಮ್ಮೆ ಚಂದ್ರಣ್ಣನ ವ್ಯಾಸಂಗದ ಕೋಣೆಗೆ ಹೋಗಿ ಬೀರುವಿನಲ್ಲಿದ್ದ ಮಹಾಪುರುಷರ ಜೀವನ ಚರಿತ್ರೆಗಳು, ಇಂಗ್ಲೀಷ್ ಕಾದಂಬರಿಗಳು, ವೇದಾಂತ ಗ್ರಂಥಗಳು–ಇವೇ ಮುಂತಾದ ಪುಸ್ತಕಗಳನ್ನು ಅಲ್ಲಿಯೇ ಇದ್ದ ಮೇಜು ಕುರ್ಚಿಗಳಲ್ಲಿ ಕುಳಿತು ಓದುವುದು, ಸಂಜೆಯ ಹೊತ್ತು ಊರಿನ ದೇವಸ್ಥಾನಕ್ಕೆ ಹೋಗಿ ಹಳ್ಳಿಯ ಜನರು ಬೆರಗಾಗಿ ಬಾಯಿ ಬಿಟ್ಟುಕೊಂಡು ಇವಳ ಸ್ನಿಗ್ಧ ಸುಂದರ ವದನವನ್ನು ನೋಡುತ್ತಾ ಇವಳ ಇಂಪಾದ ಹಾಡನ್ನು ಕೇಳುತ್ತಾ ಕುಳಿತಿದ್ದರೆ ದೇವರ ಮೇಲಿನ ನಾನಾ

ರೀತಿಯ ಸ್ತೋತ್ರಗಳನ್ನೂ ಹಾಡುಗಳನ್ನೂ ಹಾಡುವುದು, ರಾತ್ರಿ ತಮ್ಮ ಮನೆಯ ಜಗತಿಯ ಮೇಲೆ ತನ್ನ ತಂದೆಯ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ರಾತ್ರಿ ಪಾಠಶಾಲೆಯಲ್ಲಿ ಹಳ್ಳಿಯ ಚಿಕ್ಕ ಬಾಲಕಬಾಲಕಿಯರಿಗೆ ಪಾಠಗಳನ್ನು ಹೇಳಿಕೊಡುವುದು—ಇವೇ ಮುಂತಾದ ಹೆಣ್ಣಿಗೆ ಸಹಜವಾದ ನೂರಾರು ಲಲಿತ ಕಾರ್ಯಗಳಲ್ಲಿ ಕಾಲವನ್ನು ತಳ್ಳುತ್ತಿದ್ದಳು. ಅವಳ ಮನೋಲೋಕದಲ್ಲಿ ಮೂಡಿ ಮೂಡಿ ಅರಳುತ್ತಿದ್ದ ಭಾವನಾ ಚಿತ್ರಗಳೆಂದರೆ ಚಂದ್ರಣ್ಣನೊಬ್ಬನನ್ನು ಕುರಿತವುಗಳು. ತಾನು ಆ ಚಂದ್ರಣ್ಣನ ಹೃದಯಭಾರ್ಯೆಯೆಂದು ಭಾವಿಸಿಕೊಂಡು ಮುಂದಿನ ಬಾಳ್ವೆಯ ಕನಸಿನ ಕುಸುಮಗಳನ್ನು ಮಾಲೆಗಟ್ಟುತ್ತಿದ್ದಳು. ಅಲ್ಲದೆ ಹೊಳೆಯ ಗಂಗೆಗೆ ಪಾತ್ರವೂ ದಡಗಳೂ ಎಷ್ಟರಮಟ್ಟಿಗೆ ಪ್ರಕೃತಿಸಿದ್ಧವೋ ಚಂದ್ರಣ್ಣನು ತನ್ನ ಭಾವೀಪತಿಯಾಗುವುದೂ ಅಷ್ಟೇ ಅನಿವಾರ್ಯಸಿದ್ಧವೆಂದು ನಂಬಿಕೊಂಡು ನಿರ್ಯೋಚನೆಯಿಂದ ಇದ್ದುಬಿಟ್ಟಳು. ಇದರಿಂದ ಚಂದ್ರಣ್ಣನ ಅಗಲಿಕೆಯನ್ನು ಸಹಿಸುವುದು ಅವಳಿಗೆ ಅಷ್ಟೇನೂ ಕಷ್ಟವಾಗಲಿಲ್ಲ.

ಗೌರಮ್ಮನವರು ತಮ್ಮ ಮಗನ ಮದುವೆಯ ವಿಷಯವನ್ನು ಅಷ್ಟೇನೂ ಮನಸ್ಸಿಗೆ ಹಚ್ಚಿಕೊಂಡಿರಲಿಲ್ಲ. ತಮ್ಮ ತಮ್ಮನೊಬ್ಬನ ಮಗಳು ತಮ್ಮ ತೌರಾದ ಕಲ್ಯಾಣದುರ್ಗದಲ್ಲಿ ಬೆಳೆಯುತ್ತಿದ್ದಳು. ಅವಳ ಹೆಸರು ದೇವಮ್ಮ. ರೂಪಿನಲ್ಲೂ ಓರಗೆಯಲ್ಲೂ ಚಂದ್ರಣ್ಣನಿಗೆ ತಕ್ಕವಳಾಗಿಯೇ ಇದ್ದಳೆಂದು ಗೌರಮ್ಮನವರು ಹಿಂದೊಮ್ಮೆ ಆಲೋಚಿಸಿದ್ದರು. ಆದರೆ ಆ ಆಲೋಚನೆ ಈಚೆಗೆ ಸನ್ನಿವೇಶಕ್ಕನುಸಾರವಾಗಿ ಬದಲಾಗಬೇಕಾಗಿತ್ತು. ಏಕೆಂದರೆ ತಮ್ಮ ಮೈದುನ ಚಿನ್ನಯ್ಯ

ನಿಗೆ ಶಾರದೆಯ ನಂತರ ಮಕ್ಕಳೇ ಆಗಲಿಲ್ಲ. ಶಾರದೆಗಾಗಲೇ ಈಗ ಹನ್ನೊಂದರಲ್ಲಿ ನಡೆಯುತ್ತಿದ್ದರೂ ಅವಳ ತಾಯಿ ಗಂಗಮ್ಮನು ಪುನಃ ಗರ್ಭಿಣಿಯಾಗುವ ಚಿಹ್ನೆ ಕಾಣಲಿಲ್ಲ. ಇದರಿಂದ ಗೌರಮ್ಮನವರಿಗೆ ತುಂಬಾ ಯೋಚನೆಗಿಟ್ಟು ಕೊಂಡಿತ್ತು. ಈ ಮಧ್ಯೆ ವಯಸ್ಸಿಗೆ ಬರುತ್ತಿದ್ದ ಶ್ಯಾಮಯ್ಯನವರ ಪುತ್ರಿ ಲಲಿತೆಯ ಮಾತುಕತೆಗಳಿಂದಲೂ ತಮ್ಮಲ್ಲಿ ಅವಳು ನಡೆದುಕೊಳ್ಳುತ್ತಿದ್ದ ರೀತಿನೀತಿಗಳಿಂದಲೂ ಅವರಿಗೆ ಒಂದು ನೂತನವೂ ಅಪೂರ್ವವೂ ಆದ ಭಾವವು ಮೂಡುತ್ತಿತ್ತು! ಅದೇನೆಂದರೆ ತನ್ನ ಸ್ವಂತ ಮಗಳಿಗಿಂತ ಹೆಚ್ಚು ಮುದ್ದಿನಿಂದ ಯಾವ ಹೆಣ್ಣನ್ನು ಸಾಕಿದರೋ ಆ ಲಲಿತೆಯೇ ತಮ್ಮ ಮುದ್ದು ಸೊಸೆಯಾಗಿ ತಮ್ಮ ಮನೆಯನ್ನು ಬೆಳಗಿಸುವಂತಾಗುತ್ತದೆ—ಎಂಬ ನಂಬಿಕೆ ಹಾರೈಕೆಗಳು ಗೌರಮ್ಮನವರೆದೆಯಲ್ಲಿ ಹೊಸಮಳೆಯ ನೀರಿನಂತೆ ತುಂಬುತ್ತಿತ್ತು! ಅದರಿಂದ ಅವರಿಗೇನೋ ಒಂದು ಅಪೂರ್ವವಾದ ತೃಪ್ತಿಯುಂಟಾಗುತ್ತಿತ್ತು. ಅದರ ಜೊತೆಯಲ್ಲಿಯೇ ಅವರ ಮೊದಲ ಸಮಸ್ಯೆಗೆ ನಿರಾಯಾಸವಾದ ಒಂದು ಉತ್ತರವೂ ಅವರ ಆಲೋಚನೆಗೆ ಹೊಳೆಯಿತು. ಅದೇನೆಂದರೆ ತಮ್ಮ ಮೈದುನ ಚಿನ್ನಯ್ಯನಿಗೆ ಕಲ್ಯಾಣದುರ್ಗದ ತಮ್ಮ ತೌರುಮನೆಯಲ್ಲಿರುವ ಏಕಮಾತ್ರ ಕನ್ಯೆಯಾದ ದೇವಮ್ಮನನ್ನು ಸಂತಾನಾರ್ಥವಾಗಿ ಎರಡನೇ ಲಗ್ನ ಮಾಡಿಕೊಳ್ಳುವುದು. ಚಂದ್ರಣ್ಣನಿಗೆ ಲಲಿತೆಯನ್ನೇ ಮದುವೆಮಾಡಿಕೊಳ್ಳುವುದು. ಶ್ಯಾಮಯ್ಯನವರು ತಮ್ಮ ಮಗನಿಗೆ ಲಲಿತೆಯನ್ನು ಕೊಡಲು ಆನಂದದಿಂದ ಒಪ್ಪುತ್ತಾರೆ. ಬಹುಶಃ ಅವರ ಮನಸ್ಸಿನಲ್ಲೂ ಅದೇ ಆಲೋಚನೆ ಇರುವುದೆಂದು ತೋರುತ್ತದೆ............ಕಾಲ ಬಂದಾಗ ಬಾಯಿ

ಬಿಡೋಣ. ಈಗಲೇ ಅವಸರವೇನು? ಹೆಣ್ಣೂ ನಮ್ಮ ಮನೆಯಲ್ಲೇ ಇದೆ. ಚಂದ್ರಣ್ಣನು ಅವನ ತಂದೆಯ ಹೃದಯಾಕಾಂಕ್ಷೆಯಂತೆ ಕಾಲೇಜಿನ ಓದನ್ನೆಲ್ಲಾ ಪೂರೈಸಿಕೊಂಡು ಬರಲಿ---ಎಂದು ಗೌರಮ್ಮನವರ ಆಲೋಚನಾಲಹರಿಯು ಹರಿದು ಅವರಿಗೆ ನೆಮ್ಮದಿಯಾಯಿತು.

ಆದರೆ ಈ ಮಧ್ಯೆ ಶ್ಯಾಮಯ್ಯನವರಲ್ಲಿ ಆಗುತ್ತಿದ್ದ ಒಳತೋಟಿಯು ಗಮನಾರ್ಹವಾದದ್ದು. ತಮ್ಮ ಹಿರಿಯ ಸಹೋದರಿಯೂ ಜಯರಾಮುವಿನ ತಾಯಿಯೂ ಆದ ರಂಗಮ್ಮನು ತೀರಿಕೊಂಡ ಸಂಗತಿಯನ್ನು ಅರಿಯುವವರೆಗೂ ಅವರು ಲಲಿತೆಯ ಮದುವೆಯ ಯೋಚನೆಯನ್ನೇ ಮಾಡಿರಲಿಲ್ಲ. ಅದು ಅವರಿಗೊಂದು ಸಮಸ್ಯೆಯಾಗಿ ಉಳಿದಿರಲಿಲ್ಲ. ತಮ್ಮ ಸ್ವಜಾತಿಯವರಾದ ಗೌರಮ್ಮನಂಥವರ ಆಶ್ರಯವು ಸಿಕ್ಕಿ ತಮ್ಮ ಮುದ್ದು ಮಗಳಿಗೆ ಚಂದ್ರಣ್ಣನಂಥ ಮುದ್ದು ಬಾಲಕನ ಸ್ನೇಹವು ದೊರಕಿದ ಮೇಲೆ ಶ್ಯಾಮಯ್ಯನವರು ತಮ್ಮ ಕಟು ದ್ವೇಷಕ್ಕೆ ಪಾತ್ರಳಾಗಿದ್ದ ಸೋದರಿ ರಂಗಮ್ಮನನ್ನೂ ಇನ್ನೂ ಚಿಕ್ಕವನಾಗಿದ್ದ ಅಳಿಯ ಜಯರಾಮುವನ್ನೂ ಅಷ್ಟಾಗಿ ಯೋಚಿಸುತ್ತಿರಲಿಲ್ಲವೆಂದೇ ಹೇಳಬೇಕು. "ಆಃ! ದೇವರು ಇದೇನು ಅನುಕೂಲ ಮಾಡಿದನು ನನಗೆ! ಚಂದ್ರಣ್ಣ ಲಲಿತೆಯರು ವಿವಾಹವಾಗಿ ದಂಪತಿಗಳಾದರೆ ನನ್ನ ಶ್ರಮವೆಲ್ಲವೂ ಸಾರ್ಥಕವಲ್ಲವೇ? ಚಂದ್ರಣ್ಣನ ತಂದೆತಾಯಿಗಳು ಶ್ರೀಮಂತರು, ಸಜ್ಜನರು, ಸಾತ್ವಿಕಶಿರೋಮಣಿಗಳು. ಅಲ್ಲದೆ ಚಂದ್ರಣ್ಣನು ಅದೆಂತಹ ಮೋಹಕಮೂರ್ತಿಯು! ರಾಮಸೀತೆಯರ ಜೋಡಿಯಂತಿಲ್ಲವೆ ಅವರ ಜೋಡಿ! ಹೆತ್ತವರಿಗೆ ಇಂತಹ ಅಳಿಯ, ಇಂತಹ ಮನೆತನ, ಇಂತಹ

ಸಂಪತ್ತು ಸಿಕ್ಕುವುದಕ್ಕಿಂತ ಬೇರೇನು ಬೇಕು ?" ಹೀಗೆಲ್ಲಾ ಶ್ಯಾಮಯ್ಯನವರು ಯೋಚಿಸುತ್ತಾ ಆನಂದಿಸುತ್ತಿದ್ದರು. ಅಲ್ಲದೆ ತಮ್ಮ ಮಗಳ ಭಾವೀಜೀವನಕ್ಕೆ ಆಧಾರವಾಗಿ ಒಂದೆರಡು ಎಕರೆ ಗದ್ದೆಯನ್ನು ಸಂಪಾದಿಸಬೇಕೆಂದು ಆ ಹಳ್ಳಿಗೆ ಬರುವುದಕ್ಕಿಂತ ಮುಂಚೆ ಚಿಂತೆ ಮಾಡುತ್ತಿದ್ದವರು ಗೌರಮ್ಮನವರ ಆಶ್ರಯವು ದೊರಕಿದ ಮೇಲೆ ಆ ಆಸೆಯನ್ನು ಬಿಟ್ಟುಬಿಟ್ಟಿದ್ದರು. "ಏನೋ ಅಷ್ಟು ಇಷ್ಟು ಹಣಕಾಸನ್ನು ಸಂಪಾದಿಸಿದರೆ ಸಾಕು. ಹೇಗಿದ್ದರೂ ಚಂದ್ರಣ್ಣನನ್ನು ಕೈ ಹಿಡಿಯುವ ನನ್ನ ಮಗಳಿಗೆ ಇನ್ನೇನು ತಾನೆ ಕಡಿಮೆಯಾದೀತು ? 'ಹೇರನೊಪ್ಪಿಸಿದವಂಗೆಲ್ಲಿಯದು ಸುಂಕ !'" ಹೀಗೆ ಶ್ಯಾಮಯ್ಯನವರ ಆಲೋಚನಾಪಥ ಸಾಗುತ್ತಿತ್ತು.

ಆದರೆ ಜಗತ್ತಿನ ಮಾನವರಲ್ಲಿ ಅದರಲ್ಲೂ ಭರತಖಂಡದ ಜನರಲ್ಲಿ ಜಾತ್ಯಾಭಿಮಾನವು ಹೇಗೆ ಇದೆಯೋ ಹಾಗೆಯೇ ತಮ್ಮ ತಮ್ಮ ವಂಶಾಭಿಮಾನವೂ ಸ್ವಾಭಾವಿಕವಾಗಿಯೇ ಇದೆ. ಅದರಲ್ಲೂ ಹೆಣ್ಣು ಗಂಡು ಕೊಟ್ಟು ತರುವ ವಿಷಯದಲ್ಲಿ ವಂಶಾಭಿಮಾನ ಗೋತ್ರಾಭಿಮಾನಗಳು ಅಧಿಕವಾಗಿಯೇ ಇವೆ. ಇದು ಕೇವಲ ವಿಶೇಷಸಂದರ್ಭಗಳನ್ನು ಬಿಟ್ಟರೆ ಭಾರತದಲ್ಲಿ ಈಗಲೂ ಹೆಚ್ಚು ಸಹಜವಾಗಿದೆ. ನದಿಯ ಪ್ರವಾಹದಲ್ಲಿ ಸಿಕ್ಕಿ ಮುಳುಗಿದವನಿಗೆ ಅಥವಾ ವಿಸ್ಮೃತಿ ಹೊಂದಿದವನಿಗೆ ಮಾತ್ರ ದಡವು ಮರೆತು ಹೋಗುವುದು ಸಹಜ. ಆದರೆ ಮುಳುಗದೆ ನೀರು ಕುಡಿಯದೆ ಸುರಕ್ಷಿತವಾಗಿ ತೇಲುತ್ತಿರುವವನು ದಡವನ್ನು ಹೇಗೆತಾನೆ ಮರೆತಾನು ? ಹಾಗೆಯೇ ಶ್ಯಾಮಯ್ಯನವರು ತಮ್ಮ ಪ್ರೀತಿಯ ಹೆಂಡತಿಯು ತೀರಿಹೋದುದರಿಂದಲೂ. ತಮ್ಮ ಬಡತನದಿಂದಲೂ, ಯಾವ

ಆಶ್ರಯವೂ ಇಲ್ಲದೆ ಚಿಕ್ಕಮಗಳನ್ನು ಹೊತ್ತು ಊರೂರಿಗೆ ಅಲೆದಾಡುವ ದುಃಖವೊದಗಿದ್ದುದರಿಂದಲೂ ಅವರು ತಮ್ಮಂತೆ ಬಡತನದಲ್ಲಿ ಮುಳುಗಿದ್ದ ಸ್ವಂತ ಅಕ್ಕ ರಂಗಮ್ಮನನ್ನೂ ಅವಳ ಮಗ ಜಯರಾಮುವನ್ನೂ ಮರೆತಿದ್ದರು. ಆ ಮರೆವನ್ನು ಅಕ್ಕತಮ್ಮಂದಿರಿಗೆ ಹಿಂದೆ ಒಡವೆಯ ವಿಷಯದಲ್ಲಿ ಉಂಟಾಗಿದ್ದ ಜಗಳವೂ ರಂಗಮ್ಮನು ಈ ವಿಷಯದಲ್ಲಿ ತಮ್ಮನೊಂದಿಗೆ ನಡೆದುಕೊಳ್ಳುತ್ತಿದ್ದ ಹೀನರೀತಿಯೂ ಇನ್ನೂ ಪ್ರಬಲವಾಗಿ ಹೆಚ್ಚಿಸಿದ್ದುವು. ಆದರೆ ಈಗ ಶ್ಯಾಮಯ್ಯನವರಿಗೆ ಆಶ್ರಯವು ಸಿಕ್ಕಿತ್ತು. ಸ್ವಲ್ಪ ಗರಿಗಟ್ಟಿಕೊಂಡು ಮುಂದಿನ ಜೀವನಕ್ಕೆ ತಾಪತ್ರಯವಿಲ್ಲದಂತೆ ದೇವರು ಅನುಕೂಲ ಮಾಡಿದ್ದನು. ಹೀಗಿರುವಾಗ ಅವರು ತಮಗಿಂತ ಅಧೋಗತಿಯಲ್ಲಿ ಬಿದ್ದಿರುವ ತಮ್ಮ ಸಂಪದವರನ್ನು ಮರೆಯುವುದು ಹೇಗೆ? ಸಾಮಾನ್ಯವಾಗಿ ಲೋಕದಲ್ಲಿ ತಮಗನುಕೂಲವೊದಗಿದರೆ ತಮ್ಮ ಬಡಬಂಧುಗಳನ್ನು ಮರೆಯುವುದೇ ರೂಢಿ. ಆದರೆ ಶ್ಯಾಮಯ್ಯನವರಿಗೆ ತಮ್ಮ ಅಕ್ಕನ ಮೇಲೂ ಅಕ್ಕನ ಮಗಳ ಮೇಲೂ ಅವರ ನಡೆನುಡಿಗಳಿಗಾಗಿ ತಿರಸ್ಕಾರವಿತ್ತೇ ವಿನಃ ಅಕ್ಕನ ಮಗ ಜಯರಾಮುವಿನ ಮೇಲೆ ಯಾವ ತಿರಸ್ಕಾರವೂ ಇರಲಿಲ್ಲ. ಹೀಗಿದ್ದರೂ ಶ್ಯಾಮಯ್ಯನವರು ಅವರನ್ನೆಲ್ಲಾ ಮರೆತೇಬಿಡುತ್ತಿದ್ದರು. ಪ್ರಬಲವಾದ ಗ್ರಹದ ಆಕರ್ಷಣೆಗೆ ಸಿಕ್ಕಿದ ವಸ್ತು ಅಬಲವಾದ ಗ್ರಹದ ಆಕರ್ಷಣೆಗೆ ಮಣಿಯುವುದುಂಟೆ? ಗೌರಮ್ಮ ಚಂದ್ರಣ್ಣನಂಥವರ ಆಶ್ರಯ ನಂಟು ದೊರಕಿದ ಮೇಲೆ ರಂಗಮ್ಮ ಜಯರಾಮುರವರ ನಂಟು ಯಾರಿಗೆ ಬೇಕಾಗುತ್ತದೆ? ಆದುದರಿಂದ ಶ್ಯಾಮಯ್ಯನವರು ಅಕ್ಕನನ್ನೂ ಅಕ್ಕನ ಮಗನನ್ನೂ ಮರೆತುಬಿಡುತ್ತಿದ್ದ

ತೆಂದರೆ ಆಶ್ಚರ್ಯವೇನೂ ಇಲ್ಲ. ಆದರೆ ರಂಗಮ್ಮನು ಸತ್ತು ಹೋದ ಸಂಗತಿಯನ್ನು ಒಂದು ತಿಂಗಳ ಮೇಲೆ ಕೇಳಿದ ಶ್ಯಾಮಯ್ಯನವರು ಅದಾವುದೋ ಅಮೇಯವಾದ ಶೋಕ ಮರಿಗೆ ಸಿಕ್ಕಿದರು! ಅವರ ಕರುಳು ಬೆಂದುಹೋಯಿತು. ಬದುಕಿದ್ದಾಗ ಅಕ್ಕನ ಮೇಲಿದ್ದ ಸಿಟ್ಟು ಅವಳು ಸತ್ತಾಗ ಸಂಕಟವಾಯಿತು. ತನ್ನ ಮಗಳನ್ನು ಒಬ್ಬನೇ ತಮ್ಮನಾದ ತಾನು ಮದುವೆಯಾಗಲಿಲ್ಲವೆಂಬ ಸಿಟ್ಟಿಗೆ ಆಕೆಯು ತನ್ನ ಮೇಲೆ ಏನೇನು ಶಾಪ ಹಾಕಿದಳು? ಎಷ್ಟು ಜನರ ಮುಂದೆ ತನ್ನ ಮಾನವನ್ನು ಗಾಳಿಗೆ ತೂರಿದಳು?—ಇದೆಲ್ಲವೂ ಮಂತ್ರ ಶಕ್ತಿಯಿಂದೆಂಬಂತೆ ರಂಗಮ್ಮನ ನಾವಿನಿಂದ ಶೋಕರಸವಾಗಿ ಶ್ಯಾಮಯ್ಯನವರನ್ನು ನೋಯಿಸಿತು. ಸತ್ತವರ ಮೇಲೆ ದ್ವೇಷವೇ? ಅದರಲ್ಲೂ ತನ್ನ ಸ್ವಂತ ಸೋದರಿಯ ಮೇಲೆ? "ಅಯ್ಯೋ ಪಾಪ, ಎಷ್ಟಾದರೂ ಹೆಣ್ಣಲ್ಲವೆ? ಮೂರ್ಖ ಳಲ್ಲವೇ? ಕುಗ್ರಾಮದ ಕ್ಷುಲ್ಲಕ ಸನ್ನಿವೇಶದಲ್ಲಿ ಬಡತನದ ಸುಳಿಯಲ್ಲಿ ಸಿಕ್ಕಿದವಳಲ್ಲವೇ? .... .... ಆ ನನ್ನ ಒಬ್ಬಳೇ ಸಹೋದರಿಯ ಕೂಳಿಗೂ* ಹೋಗಲು ನನಗೆ ಅದೃಷ್ಟವಿಲ್ಲ ವಾಯಿತೇ?"—ಈ ರೀತಿಯೆಲ್ಲಾ ಕರುಳಿನ ಮೊರೆ ಶ್ಯಾಮಯ್ಯ ನವರನ್ನು ಕಂಗೆಡಿಸಿತು. ಇಷ್ಟಕ್ಕೆಲ್ಲಾ ಪಶ್ಚಾತ್ತಾಪರೂಪವೋ ಎಂಬಂತೆ ಅನಾಥನಾಗಿದ್ದ ಆ **ಪ್ರಿಯ** ಸೋದರಿಯ ಒಬ್ಬನೇ ಮಗ, ಈಗ ತಂದೆತಾಯಿಯರಿಲ್ಲದೆ ಆಸ್ತಿಪಾಸ್ತಿಯಿಲ್ಲದೆ ಅನಾಥನಾಗಿರುವ ಜಯರಾಮುವಿನ ಮೇಲೆ ಅವರಿಗೆ ಕರುಣೆ ಮಮತೆ ಪ್ರೇಮವಾತ್ಸಲ್ಯಗಳು ಉಕ್ಕಿಬಂದುವು. ಅವರ

---

* ತಿಥಿ.

ಸುಪ್ತವಾಗಿದ್ದ ವಂಶಾಭಿಮಾನವೂ ಸೋದರೀಪ್ರೇಮವೂ ಎಚ್ಚತ್ತು ನೆರೆಯೇರಿ ತುಂಬಬಂದುವು. ಜಯರಾಮುವಿಗೇ ತಮ್ಮ ಮಗಳನ್ನು ಕೊಟ್ಟು ಮದುವೆಮಾಡುವುದು ಅತ್ಯಂತ ಶ್ರೇಯಸ್ಕರವೂ ವಂಶೋದ್ಧಾರಕವೂ ಆದ ಕಾರ್ಯವೆಂದು ಎಣಿಸಿದರು. ಹಾಗೆ ಕೊಡದೆಹೋದರೆ ತಾವು ತಿಳಿದೂ ತಮ್ಮ ವಂಶಕ್ಕೆ ತಮ್ಮ ಪಿತೃಲೋಕಕ್ಕೆ ಮಹಾಪರಾಧವನ್ನೂ ಸೋದರಿಗೆ ಅನ್ಯಾಯವನ್ನೂ ಮಾಡಿದಂತಾಗುತ್ತದೆ ಎಂದು ಭಾವಿಸಿದರು; ನಂಬಿದರು. “ಒಂದುಪಕ್ಷ ಚಂದ್ರಣ್ಣನಿಗೇ ಲಲಿತೆಯನ್ನು ಕೊಟ್ಟರೆ ಜಯರಾಮುವಿಗೆ ಹೆಣ್ಣು ಕೊಡುವವರಾರು? ಕೊಟ್ಟರೂ ಆ ಹೊಸ ನಂಟುತನದಿಂದುಂಟಾಗುವ ಖರ್ಚುವೆಚ್ಚಗಳಿಗೆ ಸಹಾಯಮಾಡುವವರಾರು? ನಾನಿದ್ದೂ ಜಯರಾಮುವು ಇಂತಹ ದುಃಸ್ಥಿತಿಗೀಡಾದರೆ ಸತ್ತು ಸ್ವರ್ಗದಲ್ಲಿರುವ ನಮ್ಮ ಮಾತೃಪಿತೃಲೋಕವೆಲ್ಲಾ ನನ್ನ ಮೇಲೆ ಶಾಪ ಹಾಕುವುದಿಲ್ಲವೇ? ಜಯರಾಮುವಾದರೂ ಮುಂದೆ ಸಾಯುವವರೆಗೂ ನನ್ನನ್ನು ದ್ವೇಷಿಸದೆ ಶಪಿಸದೆ ಬಿಡುತ್ತಾನೆಯೆ? ಅಲ್ಲದೆ ತಬ್ಬಲಿಯಾಗಿದ್ದರೂ ಅವನು ಧೈರ್ಯಮಾಡಿ ಓದುತ್ತಿರುವನಲ್ಲವೇ? ಜಾಣ ಹುಡುಗ! ವಂಶಸ್ಥ! ಕಷ್ಟಗಳಿಗೆ ಸಿಕ್ಕಿ ನೊಂದು ಭವಿಷ್ಯಜೀವನದ ಸಮಸ್ಯೆಗಳನ್ನು ಅರ್ಥಮಾಡಿಕೊಂಡಿದ್ದಾನೆ! ಈ ಕಷ್ಟಕಾಲದಲ್ಲಿ ಆ ನನ್ನ ಒಬ್ಬನೇ ಸೋದರಳಿಯನಿಗೆ—ಅನಾಥನಿಗೆ ನೆರವಾಗುವುದು ಸೋದರಮಾವನಾದ ನನ್ನ ಕರ್ತವ್ಯವಲ್ಲವೇ! ಕೈಲಾದಷ್ಟು ಸಹಾಯ ಮಾಡಿ ಅವನೂ ಒಂದು ಉದ್ಯೋಗದಲ್ಲಿ ನಿಂತಾಗ ನನ್ನ ಮಗಳನ್ನಿತ್ತು ಅವನದೂ ಒಂದು ಸಂಸಾರವನ್ನು ಸ್ಥಾಪಿಸಿ ಮನೆಯನ್ನು ಮಾಡಿಕೊಟ್ಟರೆ ನನಗೂ ನನ್ನ ಪಿತೃಮಾತೃ

ಲೋಕದವರಿಗೂ ಪುಣ್ಯಲೋಕವು ಲಭಿಸುವುದಲ್ಲವೆ?"— ಇಂತಹ ಆಲೋಚನೆಗಳು ಶ್ಯಾಮಯ್ಯನವರನ್ನು ಸೆರೆ ಹಿಡಿಯುತ್ತಿದ್ದುವು.

ಶ್ಯಾಮಯ್ಯನವರು ಬುದ್ಧಿವಂತರಾಗಿದ್ದರು. ಮೇಧಾವಿಗಳಾಗಿದ್ದರು. ಕನ್ನಡ, ತೆಲುಗು ಭಾಷೆಗಳ ರಾಮಾಯಣ ಮಹಾಭಾರತಗಳನ್ನು ನೀರುಕುಡಿದಂತೆ ಹಳ್ಳಿಯವರ ಮುಂದೆ ಓದುತ್ತಿದ್ದರು. ಅರ್ಥವಿವರಣೆ ಮಾಡುತ್ತಿದ್ದರು. ಉತ್ತಮ ಕಾವ್ಯಗಳನ್ನು ತಕ್ಕಮಟ್ಟಿಗೆ ಪರಿಚಯಮಾಡಿಕೊಂಡಿದ್ದರು. ಆದರೆ ಕನಸಿಗೆ ಸಮಾನವಾದ ಆದರ್ಶಗಳಿಗಿಂತ ವಾಸ್ತವ ಜಗತ್ತಿನ ಕಟು ಸತ್ಯಗಳಿಗೆ ಮತ್ತು ಪದ್ಧತಿಗಳಿಗೆ ಹೆಚ್ಚು ಬೆಲೆ ಕೊಡುತ್ತಿದ್ದರು. ಚಂದ್ರಣ್ಣ ಲಲಿತೆಯರ ಪ್ರೇಮವು ಆದರ್ಶವಾದುದೆಂದೂ ಅದನ್ನು ಅಲುಗಿಸುವುದರಿಂದ ಕೊನೆಯ ಪಕ್ಷ ಆ ಇಬ್ಬರು ವ್ಯಕ್ತಿಗಳಿಗಾದರೂ ದುರಂತಸಮವಾದ ನೋವನ್ನುಂಟುಮಾಡಿದಂತಾಗುತ್ತದೆಂದೂ ಅವರ ಒಳದನಿಯೊಂದು ಹೇಳುತ್ತಿತ್ತು ಆದರೆ ತಮ್ಮ ಮಗಳ ಮೇಲೆ ತಮಗೆ ಪೂರ್ಣ ಅಧಿಕಾರವಿದೆಯೆಂದೂ ತಾವು ಮಾಡುವುದೆಲ್ಲವೂ ಅವಳ ಭಾವೀ ಶ್ರೇಯಸ್ಸಿಗಾಗಿಯೇ ಹೊರತು ಬೇರೇನೂ ಅಲ್ಲವೆಂದೂ ಅದನ್ನು ಲಲಿತೆಯು ವಿದ್ಯಾವಂತೆಯಾದುದರಿಂದ ಅರಿತು ಒಪ್ಪಿಕೊಳ್ಳುತ್ತಾಳೆಂದೂ ಅವರಿಗೆ ಪೂರ್ಣ ಭರವಸೆಯಿತ್ತು. ಆದರೆ ಆ ಮುದ್ದುಮಕ್ಕಳ ಸ್ನೇಹವು ಇಂದಿಗೆ ಹನ್ನೊಂದು ವರ್ಷಗಳ ದೀರ್ಘ ಅವಧಿಯಲ್ಲಿ ನಿರಾತಂಕವಾಗಿ ನಿರ್ಭೀತವಾಗಿ ಗಾಢವಾಗಿ ಬೆಳೆದು ಪರಮಾವಧಿಯನ್ನು ಮುಟ್ಟಿದೆಯೆಂಬ ಆಲೋಚನೆಯು ಅವರ ಮನದಲ್ಲಿ ಸುಳಿದಾಕ್ಷಣ ನಿಜವಾಗಿಯೂ ಶ್ಯಾಮಯ್ಯನವರ ಹೃದಯವು

ಹಿಂಡಿದಂತಾಗುತ್ತಿತ್ತು! ಚಂದ್ರಣ್ಣನು ಈಗ ಇಪ್ಪತ್ತೆರಡರ ತರುಣನಾದರೂ ಲೋಕೋತ್ತರವಾದ ಸೌಂದರ್ಯಕ್ಕೆ ಅಧಿದೇವನಾಗಿದ್ದರೂ ಅವನ ನಿಷ್ಕಪಟವಾದ ಮನಸ್ಸಿನಲ್ಲಿ ಲಲಿತೆಯಲ್ಲದೆ ಬೇರಾವ ಕನ್ನೆಯರ ನೆರಳೂ ಸುಳಿದಿಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಹಾಗೆಯೇ ಲಲಿತೆಯ ಮನಸ್ಸಿನಲ್ಲಿ ಚಂದ್ರಣ್ಣನಲ್ಲದೆ ಬೇರೆ ಯಾವ ಗಂಡುಮಕ್ಕಳ ನೆರಳೂ ಸುಳಿದಿಲ್ಲವೆಂಬುದನ್ನೂ ಅವರು ಚೆನ್ನಾಗಿ ಬಲ್ಲವರಾಗಿದ್ದರು. ಅಂತಹ ಆದರ್ಶಮಯವಾದ ಪ್ರೇಮವನ್ನು ಛಿದ್ರಗೊಳಿಸುವುದೆಂದರೆ ಕಟುಕನ ಕೆಲಸವೆಂಬುದೂ ಅವರಿಗೆ ವೇದ್ಯವಾಗಿತ್ತು. ಅಲ್ಲದೆ ಹಾಗೆ ಅಂತಹ ಪ್ರೇಮವನ್ನು ಛಿದ್ರಗೊಳಿಸುವುದರಿಂದ ಕೋಮಲವಾದ ಎರಡು ಜೀವಾತ್ಮರಿಗೆ ಎಂತಹ ವ್ಯಥೆಯನ್ನುಂಟುಮಾಡುತ್ತಿದ್ದೇನೆಂಬುದೂ ಶ್ಯಾಮಯ್ಯನವರಿಗೆ ತಿಳಿಯದಿರಲಿಲ್ಲ. ಆದರೆ ಮರುಕ್ಷಣದಲ್ಲಿಯೇ ಅವರ ವಿಚಾರಣೀಯವಾದ ತರ್ಕವು ತನ್ನ ಪ್ರಬಲವಾದ ಪಾಂಡಿತ್ಯವನ್ನು ಪ್ರದರ್ಶನ ಮಾಡದೆ ಬಿಡಲಿಲ್ಲ:—

"ಈ ಇಹಪ್ರಪಂಚದಲ್ಲಿ ಆದರ್ಶಪ್ರೇಮವೆಂಬುದು ಎಲ್ಲಿಯೂ ಪೂರ್ಣವಾಗಿ ವಿಜಯವಾಗಿಲ್ಲ. ಅದು ಬರೀ ಕಾವ್ಯಪ್ರಪಂಚದ ಕವಿಗಳ ಭಾವಲೋಕದ ಕನಸು! ವಾಸ್ತವ ಜಗತ್ತಿನ ನನಸಲ್ಲ! ಅಲ್ಲದೆ ಆದರ್ಶವೆಂಬುದು ಸಾಗರದ ಅತಿ ಪ್ರಚಂಡವಾದ ಅಲೆಯಿದ್ದಂತೆ. ಅದು ಇತರ ಸಣ್ಣ ಅಲೆಗಳನ್ನು ಒತ್ತರಿಸಿ ಗುಡಿಸಿ ಅವುಗಳ ಅಸ್ತಿತ್ವವನ್ನುರುಳಿಸಿ ತಾನೇ ತಾನಾಗಿ ಸಾಗರವನ್ನೆಲ್ಲಾ ವಿಕ್ಷುಬ್ಧಗೊಳಿಸುವ ಕ್ರಾಂತಿಕಾರಕವಾದ ಸ್ವಭಾವವುಳ್ಳದ್ದು. ಒಮ್ಮೊಮ್ಮೆ ವಿನಾಶಕಾರಿಯಾದುದು! ಅಂತಹ ಪ್ರಚಂಡವಾದ ಅಲೆಯಿಂದ ಸಾಗರದ

ಪ್ರಾಣಿಗಳಿಗೆ ಕ್ಷೇಮವಿಲ್ಲ. ಹಡಗು ದೋಣಿ ತೆಪ್ಪಗಳಿಗೆ ಕ್ಷೇಮವಿಲ್ಲ. ಸಾಗರದ ನಡುವಿರುವ ಸಣ್ಣಪುಟ್ಟ ದ್ವೀಪಗಳಿಗೆ ಕ್ಷೇಮವಿಲ್ಲ. ಅದರ ಅಪ್ಪಳಿಕೆಗೆ ಎಲ್ಲವೂ ತುತ್ತಾಗಬೇಕಾಗುತ್ತದೆ. ಅಂತಹ ದರ್ಪದ ಅಲೆಯನ್ನು ಭೂಮಿಯ ಗಟ್ಟಿ ದಡವಾದರೂ ತಡೆಯದಿದ್ದರೆ ಪ್ರಪಂಚವು ಉಳಿಯುತ್ತಿತ್ತೇ? ಹಾಗಾದರೂ ಆ ಅಲೆಯು ಭೂಮಿಯ ಮೇಲೆಯನ್ನಪ್ಪಳಿಸಿ ಅಪ್ಪಳಿಸಿ ಸ್ವಲ್ಪಸ್ವಲ್ಪವಾಗಿ ಕೆಡಹಿ ನುಂಗುವ ಸಾಹಸವನ್ನು ಸದಾ ಮಾಡುತ್ತಿದೆ! ಹೀಗಿರುವಾಗ ಅಂತಹ ಅಲೆಯನ್ನು ತಡೆಯುವುದೇ ಪ್ರಪಂಚಕ್ಕೆ ಕ್ಷೇಮ! ಹಾಗೆಯೇ ಆದರ್ಶ ಪ್ರೇಮವೆಂಬ ಅಲೆಯು ವಾಸ್ತವ ಜಗತ್ತಿನ ಬಂಡೆಗೆ ಬಡಿದು ಯುಗಯುಗಗಳಿಂದಲೂ ಸೋಲನ್ನೊಪ್ಪಿಕೊಂಡು ಬಂದಿದೆ! ಇಲ್ಲದೇ ಹೋಗಿದ್ದರೆ ಆದರ್ಶದ ಹೆಸರಿನಲ್ಲಿ ಸ್ವೇಚ್ಛಾಚಾರವು ಹೆಚ್ಚಿ ಜಗತ್ತು ಅಲ್ಲೋಲಕಲ್ಲೋಲವಾಗುತ್ತಿತ್ತು. ಸಾಮಾನ್ಯರು, ದೀನರು, ದಡ್ಡರು, ಕುರೂಪಿಗಳು ಬಾಳುವುದೇ ಕಷ್ಟವಾಗುತ್ತಿತ್ತು! ಸಂಸಾರಗಳ ಕಟ್ಟು ಸಡಿಲವಾಗುತ್ತಿತ್ತು! ಇಷ್ಟೆಲ್ಲಾ ದೂರ ಯೋಚನೆ ಮಾಡುವ ಪ್ರಮೇಯವಾದರೂ ಏನಿದೆ? ನಮ್ಮ ಜಯರಾಮುವನ್ನು ಚಿಕ್ಕಂದಿನಲ್ಲಿ ನೋಡಿದ್ದೇನೆ. ಈಚೆಗೂ ಒಂದೆರಡು ಸಾರಿ ಅನಂತಪುರದಲ್ಲಿ ಕದ್ದು ನೋಡಿದ್ದೇನೆ. ಅವನೇನಾಗಿದ್ದಾನೆ? ಬಣ್ಣದಲ್ಲಿ ಚಂದ್ರಣ್ಣನಿಗಿಂತ ಕಡಿಮೆಯಿರಬಹುದು. ಹಸು ಬಣ್ಣವನ್ನು ತೊಳೆದುಕೊಂಡು ಕುಡಿಯಬೇಕೇ? ಜಯರಾಮುವೇನು ಅಂಥಾ ಕಪ್ಪು ಅಲ್ಲ. ಎಣ್ಣೆಗೆಂಪಾಗಿದ್ದಾನೆ. ಬೆಳ್ಳಗಿರುವುದಕ್ಕಿಂತ ಎಣ್ಣೆಗೆಂಪೇ ಚೆನ್ನವೆಂದು ಅನೇಕರ ನಂಬಿಕೆ! ಇನ್ನು ರೂಪಿನಲ್ಲಿ........ಸಾಕು. ಸಾಕು........ಕರ್ಪೂರದ ಬೊಂಬೆಯ

ಮುಖವೇ ಆಗಬೇಕೇನು ?......ತಂದೆತಾಯಿಗಳಿಲ್ಲದಿದ್ದರೂ ಸ್ವಸಾಹಸದಿಂದ ಲಲಿತೆಯ ತರಗತಿಯಲ್ಲಿಯೇ ಓದುತ್ತಿದ್ದಾನೆ.........ನಮ್ಮ ಲಲಿತೆಗೆ ಸರ್ವರೀತಿಯಲ್ಲೂ ತಕ್ಕವನಾದ ವರನಾಗಿದ್ದಾನೆ. ಅಲ್ಲದೆ ಚಂದ್ರಣ್ಣನಿಗೆ ಹೆಣ್ಣು ದೊರಕುವುದೇನು ಕಷ್ಟ ? ಏನು ಅತಿಶಯ ? ಲಲಿತೆಯಷ್ಟೇ ಸುಂದರವಾದ ಹುಡುಗಿಯರು ಅವನಿಗೆ ಅನಾಯಾಸವಾಗಿ ದೊರಕುತ್ತಾರೆ. ವ್ಯಾಸಂಗವನ್ನು ಮುಂದುವರಿಸಿ ದೊಡ್ಡ ಪದವೀಧರನಾಗಬೇಕೆಂದಿರುವ ಅವನಿಗೆ ಆ ಪೇಟೆಯಲ್ಲಿಯೇ ಮುತ್ತಿನಂಥಾ ಹೆಣ್ಣನ್ನು ಕಾಲುತೊಳೆದು ಕನ್ಯಾದಾನಮಾಡಿ ವರದಕ್ಷಿಣೆಯನ್ನು ಹೆಗಲಿಗೇರಿಸುವವರಿದ್ದಾರೆ? ಲಲಿತೆಗಿಂತ ಅನುಕೂಲವಾದ ಸಂಬಂಧಗಳು ದೊರಕುವುದಕ್ಕೆ ಚಂದ್ರಣ್ಣನು ಸರ್ವರೀತಿಯಲ್ಲೂ ಯೋಗ್ಯನಾಗಿದ್ದಾನೆ. ಆದುದರಿಂದ ನಮ್ಮ ಲಲಿತೆಯನ್ನು ನಮ್ಮ ಮುರುಟಿಕೊಂಡಿರುವ ವಂಶವನ್ನು ಚಿಗುರಿಸಲು ಜಯರಾಮುವಿಗೆ ಕೊಡಬೇಕಾದುದೇ ನ್ಯಾಯ. ಕೊಡುವುದೇ ನಿಶ್ಚಯ. ಆದರಿಂದ ನನ್ನ ಜನ್ಮವು ಸಾರ್ಥಕವಾಗುತ್ತದೆ.'' ತಮ್ಮ ಈ ವಿಚಾರಸರಣಿಯಿಂದ ಶ್ಯಾಮಯ್ಯನವರಿಗೆ ಏನೋ ಒಂದು ರೀತಿಯ ತೃಪ್ತಿಯುಂಟಾಗುತ್ತಿತ್ತು. ತಮ್ಮ ನಿಶ್ಚಯದಂತೆ ನಡೆಯಲು ಧೈರ್ಯ ಮೂಡುತ್ತಿತ್ತು.

ಆದರ್ಶಪ್ರೇಮದ ವಿರುದ್ಧವಾಗಿ ಇಷ್ಟೆಲ್ಲಾ ತರ್ಕ ಮಾಡುತ್ತಿದ್ದ ಶ್ಯಾಮಯ್ಯನವರು ಒಂದನ್ನು ಮಾತ್ರ ಮರೆತಿದ್ದರು. ಅದೇನೆಂದರೆ ತಮ್ಮ ಅಕ್ಕನ ಮಗಳನ್ನು ಅನಾಗರಿಕಳೆಂಬ ನೆಪದಿಂದ ಮದುವೆಯಾಗಲು ಒಪ್ಪದೆ ತಾವು ಮೊದಲಿಂದಲೂ ಮೆಚ್ಚಿದ್ದ ಸ್ವಲ್ಪ ವಿದ್ಯಾವಂತೆಯೂ

ಮತ್ತು ಅತ್ಯಂತ ಸುಂದರಳೂ ಆಗಿದ್ದ ಹೆಣ್ಣನ್ನೇ ಮದುವೆಯಾಗಿದ್ದುದು. ತಮ್ಮ ಏಕಮಾತ್ರ ಸೋದರಿಯ ದ್ವೇಷವನ್ನಾದರೂ ಕಟ್ಟಿಕೊಂಡು ತಮ್ಮ ಆದರ್ಶವನ್ನು ಸಾಧಿಸಿಕೊಂಡಿದ್ದರು! ಬೇರೆಯವರ ವಿಷಯಕ್ಕೆ ಮಾತ್ರ ಆ ತತ್ವ ಹೊರತು! ವಿನಾಶಕರ! ಕ್ರಾಂತಿಕಾರಕ! ಇದೊಂದು ಪ್ರಾಪಂಚಿಕ ಸತ್ಯ.

ಶ್ಯಾಮಯ್ಯನವರಿಗೆ ತಮ್ಮ ಹೊಸ ನಿರ್ಧಾರವನ್ನು ಲಲಿತೆಗೆ ತಕ್ಷಣ ತಿಳಿಸೋಣವೆಂದಾಗ ಮಾತ್ರ ಮನಸ್ಸು ಹಿಂಜರಿಯುತ್ತಿತ್ತು. ಜಯರಾಮುವು ಯಾರೆಂಬುದು ಲಲಿತೆಗೆ ತಿಳಿದಿದೆಯೆಂದು ಅವರು ನಂಬಿದ್ದರು. ತಾವು ಮೊಟ್ಟ ಮೊದಲು ಜಯರಾಮುವಿಗೆ ಬರೆದ ಕಾಗದ ಚಂದ್ರಣ್ಣ ಲಲಿತೆಯರ ಕೈ ಸೇರಿದೆಯೆಂದೂ ಅದರಿಂದ ಜಯರಾಮು ಲಲಿತೆಯರಿಗೆ ಪರಸ್ಪರ ಪರಿಚಯವಾಗಿದೆಯೆಂದೂ ಅವರು ನಂಬಿದ್ದರು. ಆದುದರಿಂದ ಕಾಲಬಂದಾಗ ಒಂದೇ ಸಾರಿ ಲಲಿತೆಯನ್ನು ಕುರಿತು, "ಪಿತೃಭಕ್ತಿಯು ಶ್ರೇಷ್ಠವೆಂದು ವಿದ್ಯಾವಂತೆಯಾದ ನೀನು ನಂಬಿದ್ದರೆ ಜಯರಾಮುವನ್ನು ಮದುವೆಯಾಗಿ ನಮ್ಮ ವಂಶೋದ್ಧಾರ ಮಾಡಮ್ಮ. ಚಂದ್ರಣ್ಣನನ್ನು ಅಣ್ಣನೆಂದು ಭಾವಿಸು. ಅದರಿಂದ ಸರ್ವರಿಗೂ ಕಲ್ಯಾಣವಾಗುತ್ತದೆ. ಇಷ್ಟರ ಮೇಲೆ ನಿನಗೆ ತಿಳಿದಂತೆ ಮಾಡು ಲಲಿತಾ." ಎಂದುಬಿಟ್ಟರೆ ಲಲಿತೆಯು ತಾನೇ ಇನ್ನೇನು ಮಾಡುತ್ತಾಳೆ? ನನಗೆ ಅವಿಧೇಯಳಾಗಿ ಅವಳು ಎಂದೂ ನಡೆದಿಲ್ಲ. ನಡೆಯಲಾರಳು. ಹಾಗೆ ಅವಳು ನನ್ನ ಮಾತನ್ನು ಮೀರುವುದಕ್ಕೆ ಗೌರಮ್ಮನವರೂ ಒಪ್ಪುವುದಿಲ್ಲ. ಚಂದ್ರಯ್ಯನ ಮಾತು ಹಾಗಿರಲಿ! ನನ್ನ ಲಲಿತೆಯು

ಧರ್ಮವನ್ನು ನಡೆಸುತ್ತಾಳೆಯೋ ಅಥವಾ ಮೀರುತ್ತಾಳೆಯೋ ಎಂಬುದನ್ನು ನೋಡಿಯೇ ಬಿಡೋಣ. ಆದುದರಿಂದ ಈ ವಿಷಯವನ್ನು ಅವಳಿಗೆ ಮೊದಲೇ ತಿಳಿಸಿ ದೀರ್ಘವಾದ ಮನೋವ್ಯಥೆಯನ್ನುಂಟುಮಾಡುವುದು ಸರಿಯಲ್ಲ. ಜಯರಾಮುವು ಮದುವೆಗೆ ಎಲ್ಲ ಏರ್ಪಾಡನ್ನೂ ಸಿದ್ಧಗೊಳಿಸಿ ಕೊಂಡಮೇಲೆ ತಿಳಿಸುವುದೇ ಸರಿ.'' ಎಂದು ಶ್ಯಾಮಯ್ಯನವರು ನಿರ್ಧರಿಸಿಕೊಂಡರು. ಮನಸ್ಸು ತಡೆಯಲಾರದೆ ಒಮ್ಮೆ ಎಲ್ಲಿಗೆ ಹೋಗುತ್ತೇನೆಂಬುದನ್ನು ಯಾರಿಗೂ ತಿಳಿಸದೆ ಅನಂತಪುರಕ್ಕೆ ಹೋಗಿ ಜಯರಾಮುವನ್ನು ನೋಡಿಕೊಂಡು ಬಂದರು. ಜಯರಾಮುವಿನ ಜಾತಕವನ್ನು ನೋಡ ಬಯಸಿದರು. ಆದರೆ ಅವನಿಗೆ ಜಾತಕವಿರಲಿ, ಜನ್ಮನಕ್ಷತ್ರ ವನ್ನೂ ಗುರುತುಮಾಡಿಟ್ಟವರಿರಲಿಲ್ಲ. ಕೊನೆಗೆ ನಾಮ ನಕ್ಷತ್ರದ ಮೇಲೆ ಪುರೋಹಿತರೊಬ್ಬರಲ್ಲಿ ಸಮಾಧಾನವಾದ ಉತ್ತರವನ್ನು ಪಡೆದು ಜಯರಾಮುವಿಗೆ ಹೇಳುವುದನ್ನೆಲ್ಲಾ ಹೇಳಿ ಸ್ವಲ್ಪ ಹಣವನ್ನೂ ಕೊಟ್ಟು ವಾಪಸು ಬಂದರು. ಆಗ ಶ್ಯಾಮಯ್ಯನವರು ಅನಂತಪುರದಲ್ಲಿಯೇ ಗುರುಮಹಾಶಯನ ಮನೆಯಲ್ಲಿದ್ದುಕೊಂಡು ಕಾಲೇಜಿನಲ್ಲಿ ಮೊದಲ ಬಿ.ಎ. ತರಗತಿಯಲ್ಲಿ ಓದುತ್ತಿದ್ದ ಚಂದ್ರಣ್ಣನನ್ನು ನೋಡಿ ಬರಲಿಲ್ಲ!

ಜಯರಾಮುವನ್ನು ನೋಡಿ ಬಂದಮೇಲೆ ಶ್ಯಾಮಯ್ಯನವರು ಒಂದಲ್ಲ ಒಂದು ನೆಪದಿಂದ ಜಯರಾಮುವಿನ ಹೆಸರನ್ನು ತಮ್ಮ ಮಗಳ ಮುಂದೆ ಎತ್ತಿ ಅವನ ಪರಿಚಯವನ್ನು ಹೇಳಿ ಅವನ ಗುಣಕಥನವನ್ನು ಮಾಡುತ್ತಿದ್ದರು. ತಮ್ಮ ತಂದೆಯ ಸ್ವಂತ ಸೋದರಳಿಯನೊಬ್ಬನಿದ್ದಾನೆ ಎಂಬುದನ್ನು

ಪ್ರಥಮವಾಗಿ ಅರಿತ ಲಲಿತೆಗೆ ನೋವಾಯಿತೋ ಸಂತೋಷ ವಾಯಿತೋ ಹೇಳಬಲ್ಲವರಾರು? ಆದರೆ ತಂದೆಯು ಸ್ವಂತ ಸೋದರಳಿಯನನ್ನು ಅಷ್ಟು ತನ್ನ ಮುಂದೆ ಹೊಗಳುತ್ತಿದ್ದ ಉದ್ದೇಶವನ್ನು ಲಲಿತೆಯು ಅರ್ಥಮಾಡಿಕೊಂಡಮೇಲೆ ಆವಳಿಗಾದ ದುಃಖವೆಂಥದೆಂಬುದನ್ನು ಲೇಖಿನಿಯು ಬಣ್ಣಿಸ ಲಾರದು. ತಂದೆಯು ಜಯರಾಮುವಿನ ಹೆಸರನ್ನೆತ್ತಿದಾಗ ಲೆಲ್ಲಾ ಲಲಿತೆಯ ವದನವು ಭಾವಹೀನವಾಗಿ ಮಂಜಿನ ಹೊಡೆತಕ್ಕೆ ಬಾಡುವ ಬಿಳಿಯ ತಾವರೆಯಂತಾಗುತ್ತಿತ್ತು. ಆದರೂ ಅವಳು ತಂದೆಗೆ ಪ್ರತಿಯಾಡದೆ ವಿಧೇಯತೆಯ ಕುರುಹೆಂಬಂತೆ ಮೌನವಾಗಿರುತ್ತಿದ್ದಳು. ಅಲ್ಲಿಂದ ಮುಂದೆ ಲಲಿತೆಯು ಅನಂತಪುರದಲ್ಲಿದ್ದ ಚಂದ್ರಣ್ಣನಿಗೆ ಕಾಗದಗಳ ನ್ನೇನಾದರೂ ಬರೆಯುತ್ತೇನೆಂದು ಬಯಸಿದರೆ ಶ್ಯಾಮಯ್ಯ ನವರು, "ನೀನೇ ಹಾಗೆಲ್ಲಾ ನೇರವಾಗಿ ಬರೆಯಬಾರದಮ್ಮ. ಏನಿದ್ದರೂ ನನಗೆ ಹೇಳು. ನಾನು ಬರೆಯುವ ಕಾಗದಗಳ ಲ್ಲಿಯೇ ನಿನ್ನ ಅಭಿಪ್ರಾಯಗಳನ್ನೂ ನಮಸ್ಕಾರಗಳನ್ನೂ ಚಂದ್ರಣ್ಣನಿಗೆ ತಿಳಿಸುತ್ತೇನೆ.'' ಎನ್ನುತ್ತಿದ್ದರು. ಲಲಿತೆಯು ಬಲೆಗೆ ಬಿದ್ದ ಪ್ರಾಣಿಯಂತಾದಳು. ಆದರೆ ತಂದೆಯ ಮಾತಿಗೆ ಪ್ರತ್ಯುತ್ತರವನ್ನಾಡದೆ ಮಣಿದಳೇ ಹೊರತು ತನ್ನ ಕಟ್ಟನ್ನು ತಾನೆಂದೂ ಮುರಿಯುವ ಸಾಹಸಮಾಡಲಿಲ್ಲ. ಏನೇ ಆದರೂ ಶ್ಯಾಮಯ್ಯನವರು **ಮದುವೆ** ಎಂಬ ಒಂದು ಶಬ್ದವನ್ನೆತ್ತದೆ ಇಷ್ಟು ಜಾಣತನವನ್ನು ಪಯೋಗಿಸಿದರೂ ಸಹ ಲಲಿತೆಯ ಕರುಳಿಗೆ ನೋವಿನ ಬಾಣವು ಚುಚ್ಚದೆ ಇರಲಿಲ್ಲ. ಚಂದ್ರಣ್ಣನ ಕೋಣೆಯಲ್ಲಿ ಓದುವ ನೆಪದಿಂದ ಗಂಟೆಗಟ್ಟಲೆ ಕುಳಿತು ತನ್ನ ಪ್ರಿಯಮೂರ್ತಿ ಚಂದ್ರಣ್ಣನನ್ನು ಕಲ್ಪಿಸಿಕೊಂಡು, "ಸ್ವಾಮೀ,

ಏನಾದರೂ ನನ್ನನ್ನು ಕೈಬಿಡಬೇಡಿರಿ.'' ಎಂದು ಮೌಂತಾಗಿ ಪ್ರಾರ್ಥಿಸಿಕೊಳ್ಳುತ್ತಾ ಮೂಕಶೋಕದಿಂದ ಕಣ್ಣೀರಿನ ಕೋಡಿಯನ್ನು ಹರಿಸುತ್ತಿದ್ದಳು. ಗೌರಮ್ಮನವರೊಡನೆಯೂ ತಂದೆಯ ಮನೋಭಿಪ್ರಾಯವನ್ನು ಹೇಳುವುದಕ್ಕೆ ಹೆದರಿ ದಳು. ಅದರಿಂದ ಅವರಿಬ್ಬರಿಗೂ ಮನಸ್ತಾಪವಾದರೆ? ತಂದೆಯ ಮನಸ್ಸು ತನ್ನ ಮೇಲೆ ವಿರಸವಾದರೆ? ''ಅಯ್ಯೋ ದೇವರೇ, ನನ್ನನ್ನು ಚಂದ್ರಣ್ಣನ ಸಾನ್ನಿಧ್ಯಸ್ವರ್ಗದಿಂದ ತಳ್ಳಬೇಡ.'' ಎಂದು ದೇವರೊಬ್ಬನನ್ನು ಮರೆಹೊಕ್ಕಳು. ಲಲಿತೆಯು ಈಚೀಚೆಗೆ ವ್ಯಥೆಯಿಂದ ಬಾಡುತ್ತಿದ್ದುದನ್ನು ಅರಿತ ಶ್ಯಾಮಯ್ಯನವರು, ''ಇದೂ ಒಳ್ಳೆಯದೇ ಆಯಿತು. ಮದುವೆಯ ಸುದ್ದಿಯನ್ನು ಎತ್ತದಿದ್ದರೂ ಜಯರಾಮುವಿನ ಹೆಸರನ್ನು ಕೇಳಿದ ಮಾತ್ರದಿಂದಲೇ ವ್ಯಥೆಗೊಳಗಾಗಿದ್ದಾಳೆ. ಆಗಲಿ ಅವಳ ಪ್ರೇಮವೆಂಬ ಪ್ರಬಲವಾದ ಪ್ರವಾಹದ ಪಾತ್ರವನ್ನು ಬದಲಾಯಿಸಲು ಈ ವ್ಯಥೆಯೇ ಕೆಲವು ಕಾಲ ಅಭ್ಯಾಸವಾಗಬೇಕು. ಆಮೇಲೆ ನನ್ನ ಕಾರ್ಯ ಸುಲಭಸಾಧ್ಯ ವಾಗುವುದು.'' ಎಂದು ಸಮಾಧಾನಪಟ್ಟುಕೊಂಡು ಸುಮ್ಮ ನಿದ್ದುಬಿಟ್ಟರು. ಅಂತೂ ಶ್ಯಾಮಯ್ಯ ಚಂದ್ರಣ್ಣನವರ ಮಧ್ಯೆ ಉಂಟಾಗುತ್ತಿದ್ದ ಅವ್ಯಕ್ತವಾದ ಒಂದು ಬಿರುಕಿನ ಜೊತೆಗೆ ತಂದೆಮಕ್ಕಳಾದ ಶ್ಯಾಮಯ್ಯ ಲಲಿತೆಯರ ನಡುವೆಯೇ ಒಂದು ರೀತಿಯ ಸುವ್ಯಕ್ತವಾದ ಮಾನಸಿಕ ವಾದ ಬಿರುಕುಂಟಾಗುವುದಕ್ಕೆ ಪ್ರಾರಂಭವಾಯಿತು.

ಶ್ಯಾಮಯ್ಯನವರಿಗೆ ಈ ಒಳತೋಟಿಯು ಪ್ರಾರಂಭ ವಾದಂದಿನಿಂದ ಅವರ ರಾತ್ರಿ ಪಾಠಶಾಲೆಯನ್ನು ಆಸಕ್ತಿಯಿಂದ ನಡೆಸಿಕೊಂಡು ಹೋಗುವುದೂ ಅವರಿಗೆ ಕಷ್ಟವಾಗುತ್ತಾ

ಬಂದಿತ್ತು. ಆದರೂ ಆ ಸಮಸ್ಯೆಯೂ ಬಗೆಹರಿಯುವ ಕಾಲ ಬಂದಿತ್ತು. ಶ್ಯಾಮಯ್ಯನವರು ಆ ಹಳ್ಳಿಗೆ ಬಂದಂದಿನಿಂದ ಇಲ್ಲಿಯವರೆಗೆ ವಿದ್ಯಾಸರಸ್ವತಿಗೆ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದರೆನ್ನಬಹುದು. ಅವರು ಮಕ್ಕಳಿಗೆ ಪಾಠ ಹೇಳಿ ಕೊಡುವುದರಲ್ಲಿ ನಿಸ್ಸೀಮರು. ಅವರಿಗೆ ಅದೊಂದು ಆನಂದ ದಾಯಕವಾದ ಕಲೆಯಾಗಿತ್ತು. ಅವರ ಸತತವಾದ ಶ್ರಮದ ಫಲವಾಗಿ ಆ ಊರಿನ ನೂರಾರು ತರುಣರು ಓದುಬರಹ ವನ್ನು ಕಲಿತರು. ಕೆಲವರು ಮಾತ್ರ ಕಲ್ಯಾಣದುರ್ಗದ ಮಧ್ಯಮಶಾಲೆಯ ಓದನ್ನೂ ಪೂರೈಸಿಕೊಂಡು ಬಂದರು. ಆದರೆ ಚಂದ್ರಣ್ಣನಂತೆ ಇನ್ನಾರೂ ಮುಂದಕ್ಕೆ ಹೋಗಲಿಲ್ಲ. ಆದರೂ ಊರಿನ ತುಂಬಾ ಓದುಬರಹ ಬಲ್ಲವರೇ ಆಗಿಬಿಟ್ಟಿ ದ್ದರು. ಇದಕ್ಕಿಂತ ಹೆಚ್ಚಾಗಿ ಶ್ಯಾಮಯ್ಯನವರ ಸಮವಯಸ್ಕ ರನೇಕರು ಸೊಗಸಾಗಿ ಕನ್ನಡ ತೆಲುಗು ಭಾಷೆಗಳ ರಾಮಾಯಣ ಭಾರತಗಳನ್ನು ಓದುವಷ್ಟರ ಮಟ್ಟಿಗೆ ವಿದ್ಯಾವಂತರಾದರು. ಆದುದರಿಂದ ದೊಡ್ಡವರು ಚಿಕ್ಕವ ರೆನ್ನದೆ ಊರಿನ ಜನರೆಲ್ಲಾ ಶ್ಯಾಮಯ್ಯನವರಲ್ಲಿ ಗುರುಭಾವವ ನ್ನಿಟ್ಟುಕೊಂಡು ಪ್ರೀತಿಗೌರವಗಳಿಂದ ಕಾಣುತ್ತಿದ್ದರು. ಅವರ ಈ ಮಮತೆಯನ್ನು ಸದುಪಯೋಗಪಡಿಸಿಕೊಂಡು ಶ್ಯಾಮಯ್ಯನವರು ಎರಡು ವರುಷಗಳ ಹಿಂದೆಯೇ ಆ ಊರಿಗೆ ಒಂದು ಪ್ರೈಮರಿ ಶಾಲೆಯನ್ನು ಮಂಜೂರು ಮಾಡಬೇಕೆಂದು ಸರ್ಕಾರಕ್ಕೆ ಅರ್ಜಿ ಬರೆಸಿದ್ದರು. ಊರವ ರೆಲ್ಲರ ರುಜುವುಗಳು ಮಾತ್ರವಲ್ಲದೆ ಬೆಂಬಲವೂ ದೊರಕಿತು. ವಿದ್ಯಾ ಇಲಾಖೆಯವರು ಬಂದು ಊರಿನಲ್ಲಿ ಪ್ರಶಸ್ತವಾದ ಸ್ಥಳವೊಂದನ್ನು ಗೊತ್ತುಮಾಡಿ ಸ್ಕೂಲ್ ಕಟ್ಟಡಕ್ಕೆ ಸರ್ಕಾ

ರವು ಅರ್ಧ ಹಣ ಮಂಜೂರುಮಾಡುವುದೆಂದೂ ಉಪಾಧ್ಯಾಯರ ವಸತಿಗೃಹವನ್ನು ಮಾತ್ರ ಗ್ರಾಮಸ್ಥರೇ ಕಟ್ಟಿಸಿಕೊಡಬೇಕೆಂದೂ ಎರಡು ಕಟ್ಟಡಗಳ ನಿರ್ಮಾಣವೂ ಬೇಗ ಪೂರೈಸಲು ಊರಿನವರು ಸಹಕಾರ ನೀಡುವುದಾದರೆ ಒಂದೆರಡು ವರುಷಗಳಲ್ಲಿಯೇ ಸ್ಕೂಲನ್ನು ಪ್ರಾರಂಭಿಸುತ್ತೇವೆಂದೂ ಹೇಳಿ ಕಾಗದ ಪತ್ರಗಳನ್ನು ಬೆಳಸಿ ಹೋದರು. ಇಷ್ಟಾದ ಮೇಲೆ ಇನ್ನು ಮುಂದಿನ ಕೆಲಸವನ್ನು ಬಿಡಬಾರದೆಂದು ಭಾವಿಸಿ ಶ್ಯಾಮಯ್ಯನವರೇ ಮುಂದೆ ನಿಂತು ಚಂದಾ ವಸೂಲಿ ಮಾಡಿದರು. ಗ್ರಾಮದ ಉತ್ತಮ ಕುಳಗಳೆಲ್ಲಾ ಶ್ಯಾಮಯ್ಯನವರ ಮಾತಿಗೆ ಹೃತ್ಪೂರ್ಣವಾಗಿ ಸಹಕಾರವನ್ನು ನೀಡಿದರು. ಗೌರಮ್ಮನವರೊಬ್ಬರೇ ಐನೂರು ರೂಪಾಯಿಗಳನ್ನು ಕೊಟ್ಟು ತನ್ನ ಪತಿದೇವರು ತೀರಿಕೊಳ್ಳುವಾಗ ತೋರಿಸಿದ್ದ ವಿದ್ಯಾಭಿಮಾನವನ್ನು ನೆನೆದು ತನ್ನ ಮಗನ ವಿದ್ಯಾಭ್ಯಾಸದ ಜೊತೆಗೆ ತನ್ನೂರಿನಲ್ಲಿ ಒಂದು ಸರ್ಕಾರಿ ಪಾಠಶಾಲೆಯು ಬರುವ ಭಾಗ್ಯವನ್ನೂ ನೋಡುವಂತಾಯಿತಲ್ಲಾ ಎಂದು ಹರ್ಷವನ್ನೂ ತೃಪ್ತಿಯನ್ನೂ ಪಡೆದರು.

ಶ್ಯಾಮಯ್ಯನವರ ಗೌರವ ಮುಖಂಡತ್ವದಲ್ಲಿ ಮೊದಲು ಉಪಾಧ್ಯಾಯರ ವಸತಿಗೃಹವು ನಿರ್ಮಾಣವಾಯಿತು. ಇಟ್ಟಿಗೆ ಸುಡಿಸಿದ್ದು, ಕಲ್ಲು ಹೊಡೆಸಿದ್ದು, ಕಟ್ಟಡ ಕಟ್ಟಿಸಿದ್ದು, ಮುಟ್ಟು ವಗೈರೆಯನ್ನು ಕೊಯ್ಸಿ ಕೆತ್ತಿಸಿ ಜೋಡಿಸಿ ಮನೆಯ ನಿಲವನ್ನು ಎತ್ತಿಸಿದ್ದು, ಮನೆಯ ಮೇಲು ಮುದ್ದೆಯನ್ನು ಹಾಕಿಸಿದ್ದು—ಇಂತಹ ಎಲ್ಲ ಕೆಲಸಗಳಲ್ಲಿಯೂ ಶ್ಯಾಮಯ್ಯನವರು ಮುಂದೆ ನಿಂತು ಮುತವರ್ಜಿ ವಹಿಸಿದರು. ವಸತಿಗೃಹವಾಯಿತು. ಇನ್ನು ಸ್ಕೂಲ್ ಕಟ್ಟಡದ ಕಂಟ್ರಾಕ್ಟನ್ನು

ತಾವು ವಹಿಸಿಕೊಳ್ಳುವುದು ಸರಿಯಲ್ಲವೆಂದು ಊರಿನ ಪಟೇಲನೂ ಧರ್ಮಿಷ್ಠನೂ ಆಗಿದ್ದ ತಮ್ಮ ಆಪ್ತ ಮನುಷ್ಯನಿಗೇ ವಹಿಸಿದರು. ಆತನು ಸ್ವಲ್ಪ ಹಣದಾಸೆಗೆ ಮನಸ್ಸು ಮಾಡಿದರೂ ಮೂರು ತಿಂಗಳೊಳಗಾಗಿ ಸ್ಕೂಲ್ ಕಟ್ಟಡವನ್ನು ರೇಂಜ್ ಇನ್‌ಸ್ಪೆಕ್ಟರು ಒಪ್ಪುವಂತೆ ಕಟ್ಟಿಸಿಕೊಟ್ಟನು. ಹೀಗೆ ಶ್ಯಾಮಯ್ಯನವರ ಜನಸೇವಾಕಾರ್ಯದ ತಪಸ್ಸು ಹಣ್ಣಾಯಿತು. ಇನ್ನು ಸರ್ಕಾರದಿಂದ ಬೆಂಚು, ಕುರ್ಚಿ ಮೇಜು, ಹಾಸುಮಣೆಗಳು, ಗಡಿಯಾರ, ಆಫೀಸು ಕಡತಗಳು ಮುಂತಾದ ಸಾಮಾನುಗಳು ಬರುವುದೊಂದು ಉಳಿದಿದೆ. ಅದೂ ಮುಂದಿನ ಬೇಸಗೆ ರಜಾದಲ್ಲಿ ಜಮಾವಣೆಯಾಗುತ್ತದೆಂದೂ ಮುಂದಿನ ಜೂನ್ ತಿಂಗಳಿಂದ ಸ್ಕೂಲು ಪ್ರಾರಂಭವಾಗುವುದೆಂದೂ ಆಗಲೇ ಅನುಭವಸ್ಥರಾದ ಒಬ್ಬ ಉಪಾಧ್ಯಾಯರನ್ನು ಅಲ್ಲಿಗೆ ವರ್ಗಮಾಡಿ ಕಳಿಸಿ ಕೊಡಲು ಎಲ್ಲಾ ಕಾಗದಪತ್ರಗಳು ನಡೆದಿದೆಯೆಂದೂ ಕಲ್ಯಾಣದುರ್ಗದಲ್ಲಿದ್ದ ರೇಂಜ್ ಇನ್‌ಸ್ಪೆಕ್ಟರ್ ಸಾಹೇಬರು ಭರವಸೆಯನ್ನಿತ್ತಿದ್ದರು. ಈ ರೀತಿಯಾಗಿ ಶ್ಯಾಮಯ್ಯನವರು ಗೌರೀಹಳ್ಳಿಯಲ್ಲಿ ತಮ್ಮ ಶಾಶ್ವತವಾದ ಹೆಸರನ್ನು ಸ್ಥಾಪಿಸಿ ಹೋಗಲು ಎಷ್ಟು ಬೇಕೋ ಅಷ್ಟು ಗ್ರಾಮಸೇವೆಯನ್ನು ಕೈಕೊಂಡು ಮುಗಿಸಿದ್ದರು. ಇನ್ನು ತಮ್ಮ ರಾತ್ರಿಶಾಲೆಯನ್ನು ಯಾವಾಗಬೇಕಾದರೆ ಆವಾಗ ಅವರು ಕೈಬಿಟ್ಟರೂ ಗ್ರಾಮದವರು ಅದಕ್ಕೆ ಸಮ್ಮತಿಸುತ್ತಿದ್ದರು. ಶ್ಯಾಮಯ್ಯನವರು ಈ ಹನ್ನೊಂದು ಹನ್ನೆರಡು ವರುಷಗಳೂ ಪಾಠ ಹೇಳಿರುವುದು ಸಾಕು, ಈಗ ವಿಶ್ರಾಂತಿಯನ್ನು ಪಡೆಯಬೇಕೆಂಬುದು ಎಲ್ಲರ ಇಷ್ಟವಾಗಿತ್ತು. ಆದುದರಿಂದ ತಮ್ಮ ರಾತ್ರಿಶಾಲೆಯ ವಿಷಯದಲ್ಲಿ ತಮ್ಮ ಆಸಕ್ತಿಯು

ಕುಂದುತ್ತಿದ್ದುದು ಶ್ಯಾಮಯ್ಯನವರಿಗೆ ಒಂದು ಸಮಸ್ಯೆಯಾಗಿರಲಿಲ್ಲ. ಮಗಳ ಮದುವೆಯ ವಿಷಯವೊಂದೇ ಅವರಿಗೆ ಬೃಹತ್‌ಸಮಸ್ಯೆಯಾಗಿ ಕುಳಿತಿತ್ತು!



# ಐದನೆಯ ದಳ

## ನೆನಪಮೃತವಾಗುವುದು

ಸುಖದ ಕಣಸಿನ ಸ್ವಪ್ನಮಂದಿರ
ಏನು ಕೋಮಲ ಸುಂದರ!
ಬಾಲ್ಯಸ್ಮೃತಿಗಳ ಭವ್ಯ ಗೋಪುರ,
ಬರುವ ಜೀವನದಾತುರ!

—ಕುಮುದ

ಕ್ಷಣವದೊಂದೆ ಅನಂತಕಾಲ ತಾನಾಗುವುದು ।
ಅನುಭವಕೆ ಸತ್ತ್ವ ಶಿವ ಸುಂದರಗಳಮರೆ ॥
ಮನ ತುಂಬುಶಶಿಯಾಗಿ, ನೆನಪಮೃತವಾಗುವುದು ।
ಕ್ಷಣದೊಳಕ್ಷಯ ಕಾಣೊ—ಮಂಕುತಿಮ್ಮ ॥

—ಡಿ. ವಿ. ಜಿ.

ಈಗ ಚಂದ್ರಣ್ಣನು ಅನಂತಪುರದಲ್ಲಿ ತನ್ನ ಗುರು ಮಾತಾಪಿತೃಗಳ ಮನೆಯಲ್ಲಿ ಮೊದಲು ಲಲಿತೆಯ ಜೊತೆಯಲ್ಲಿದ್ದ ಕೋಣೆಯಲ್ಲಿ ಈಗ ಒಬ್ಬನೇ ಇದ್ದನು. ಹನ್ನೆರಡರ ಚಿಕ್ಕವನಾದಂದಿನಿಂದ ಇಂದಿನವರೆಗೂ ಲಲಿತೆಯ ಜೊತೆಯನ್ನು ಎಂದೂ ಬಿಟ್ಟಿದ್ದವನಲ್ಲ. ಆದುದರಿಂದ ಪ್ರಥಮದಲ್ಲಿ ಅವನ ಸ್ಥಿತಿ ನೀರಿನಿಂದ ಹೊರಕ್ಕೆ ತೆಗೆದು ಹಾಕಲ್ಪಟ್ಟ ಮೀನಿನಂತಾಯಿತು. ತನ್ನ ಪ್ರಿಯ ಗುರುದಂಪತಿಗಳ ಉದ್ಬೋಧಕ-ಪವಿತ್ರ-ಸರ್ವಾನಂದಕರವಾದ ಸನ್ನಿಧಾನವಿಲ್ಲದೆ ಹೋಗಿದ್ದರೆ ಚಂದ್ರಣ್ಣನು ವಿರಹಚಿಂತೆಯಲ್ಲಿ ಕೊರಗಬೇಕಾಗುತ್ತಿತ್ತು.

ಚಂದ್ರಣ್ಣನಿಗೆ ಲಲಿತೆಯ ಸಾನ್ನಿಧ್ಯಸ್ನೇಹಗಳು ಪ್ರಕೃತಿ ಸಹಜವೋ ಎಂಬಂತಾಗಿ ಹೋಗಿದ್ದುವೆಂದರೆ ಅತಿಶಯೋಕ್ತಿಯಲ್ಲ. ಸಸ್ಯಾದಿ ಸರ್ವಜೀವರಾಶಿಗಳಿಗೂ ಗಾಳಿ ಬೆಳಕುಗಳು ಎಷ್ಟು ಆವಶ್ಯಕವೋ ಲಲಿತೆಯ ಸಾನ್ನಿಧ್ಯಪ್ರೇಮಗಳು ಚಂದ್ರಣ್ಣನಿಗೆ ಅಷ್ಟು ಅವಶ್ಯವಾಗಿದ್ದುವೆಂಬುದು ಅವನಿಗೆ ತುಂಬಾ ವೇದ್ಯವಾಗಿತ್ತು. ಆದರೂ ಅವುಗಳು ಅವನಿಗೆ ಎಷ್ಟು ಸಹಜವಾಗಿದ್ದುವೆಂದರೆ ಲಲಿತೆಯೂ ಚಂದ್ರಣ್ಣನೂ ಜೊತೆಯಲ್ಲಿರುವವರೆಗೂ ಪರಸ್ಪರ ಆತ್ಮವಿಸ್ಮೃತವಾಗಿ ವರ್ತಿಸುತ್ತಿದ್ದರು. ಪರಸ್ಪರ ವಿಷಯದಲ್ಲಿ ಅವರಿಗೆ ಭಯ ಶಂಕೆಗಳಾವುದೂ ಇಲ್ಲದೆ ಮುಗ್ಧಸರಳಮಾನಸರಾಗಿ ನಿರ್ಮಲಹೃದಯರಾಗಿ ಜೀವಿಸುತ್ತಿದ್ದರು. ಕುರುಚಿಯು ಅವರನ್ನು ನೋಡುವುದಕ್ಕೂ ಹೆದರುತ್ತಿತ್ತು! ಪರಸ್ಪರರ ಕಲ್ಯಾಣಚಿಂತನೆಗಳು ಹೊರತು ಒಡಲ ಸೋಂಕಿನ ಸೋಗೂ ಸಹಿತ ಅವರ ಮನೋಭಿಲಾಷೆಗಳಲ್ಲಿ ಪ್ರವೇಶಿಸಿರಲಿಲ್ಲ. ಗಾಳಿಬೆಳಕುಗಳು ಸದಾ ನಮ್ಮ ಜೀವಪೋಷಣೆಯಲ್ಲಿ ನಿರತವಾಗಿದ್ದರೂ ಸಹ ಯಾರುತಾನೆ ಅವುಗಳನ್ನು ಪ್ರತ್ಯಕ್ಷವಾಗಿ ಗಮನಿಸುತ್ತಾರೆ? ಹಾಗೆಯೇ ಚಂದ್ರಣ್ಣ ಲಲಿತೆಯರ ಸ್ನೇಹವಾತ್ಸಲ್ಯಪ್ರೀತಿಗಳು ಬೆಳೆದು ಕಲ್ಪವೃಕ್ಷದ ಫಲಗಳಂತೆ ಪರಿಶೋಭಿಸುತ್ತಿದ್ದುವು. ಹೆಚ್ಚು ಹೇಳುವುದೇನು? ಅವರು ಇಬ್ಬರೂ ಗೌರಮ್ಮನವರ ಹೊಟ್ಟೆಯಲ್ಲಿಯೇ ಒಬ್ಬರಿಗೊಬ್ಬರು ಬೆನ್ನಂಟಿ ಬಂದಂತೆ ನಡೆದುಕೊಳ್ಳುತ್ತಿದ್ದರು.

ತನ್ನ ಮಹಡಿಯ ಕೋಣೆಯಲ್ಲಿ ಹಿಂದೆ ಲಲಿತೆಯು ಉಪಯೋಗಿಸುತ್ತಿದ್ದ ಆದರೆ ಈಗ ಬರಿದಾಗಿದ್ದ ಮೇಜು ಕುರ್ಚಿ ಮಂಚಗಳನ್ನು ನೋಡಿ ಚಂದ್ರಣ್ಣನಿಗೆ ತನ್ನ ಜೀವನ

ವನ್ನು ಸದಾ ಬೆಳಗುತ್ತಿದ್ದ ಅಮರವಾದ ಬೆಳಕು ಈಗ ತನ್ನ ಸಮೀಪದಿಂದ ದೂರ ಹೋಗಿ ನಕ್ಷತ್ರವಾಗಿ ರಂಜಿಸುತ್ತಿದ್ದಂತೆ ಭಾಸವಾಗುತ್ತಿತ್ತು. ಅವನು ಹಗಲೆಲ್ಲಾ ತನ್ನ ಪಾಠಪ್ರವಚನ ಗಳಲ್ಲಿ ಪೂರ್ಣಮನಸ್ಕನಾಗಿರುತ್ತಿದ್ದನು. ಆದರೆ ರಾತ್ರಿ ಗುರು ವಿನ ಉಪದೇಶಗಳನ್ನು ಕೇಳಿ ರಸದೀಪ್ತಹೃದಯನಾಗಿ ಬಂದು ಮಲಗಿದಾಗ ಮಾತ್ರ ಅವನ ಭಾವನಾಸ್ವರ್ಗದಲ್ಲಿ ರಮಣೀ ಯವಾದ ಚಿತ್ರಗಳು ಮೂಡುತ್ತಿದ್ದುವು. ಲಲಿತೆಯೇ ಆ ಸುಂದರವಾದ ಸ್ವರ್ಗಕ್ಕೆ ಸದಾ ರಾಜರಾಜೇಶ್ವರಿಯಾಗಿ ರಾರಾಜಿಸುತ್ತಿದ್ದಳು! ಚಂದ್ರಣ್ಣನು ಲಲಿತೆಯ ರೂಪವನ್ನು ತನ್ನ ಭಾವಭಿತ್ತಿಯಲ್ಲಿ ಚಿತ್ರಿಸಿಕೊಳ್ಳುವನು. ಹಾಲ್ಗಲ್ಲಿನಲ್ಲಿ ಕಡೆದಂತಿದ್ದ ಆ ಮುದ್ದು ಮುಖ! ಆ ದುಂಬಿಗುರುಳು! ಕೋಮಲತೆಯೇ ರೂಪುವೆತ್ತಂತಿದ್ದ ಆ ಕೆನ್ನೆಗಳು! ಪ್ರೇಮ ಭಾಂಡಾರದ ಮುದ್ರೆಗಳಂತೆ ಮೆರೆಯುತ್ತಿದ್ದ ಆ ವಿಶಾಲವಾದ ನೇತ್ರಗಳು! ಸ್ವಭಾವತಃ ಹವಳವರ್ಣದಿಂದ ಮಿಂಚುತ್ತಿದ್ದ ಆ ಮುದ್ದು ತುಟಿಗಳು! ಎರಡು ಕೆನ್ನೆಗಳಲ್ಲಿಯೂ ಸೃಷ್ಟಿಸಿದ ಬ್ರಹ್ಮನೇ ಮುತ್ತೊತ್ತಿದಂತಿದ್ದ ಮನೋಹರವಾದ ಚುಂಬಕ ಸುಳಿಗಳು! ಮುಂಜುಗಲ್ಲಿನ ಮೊನೆಯಂತೆ ನುಣುಪಾದ ಆ ಗಲ್ಲ! ಅದರಲ್ಲಿ ಮಲ್ಲಿಗೆಯರಳಂತೆ ಬೆಳಗುತ್ತಿದ್ದ ಮುದ್ದಾದ ಆ ಸುಳಿ! ಕೆನ್ನೆಗನ್ನಡಿಗಳಲ್ಲಿ ಪ್ರತಿಬಿಂಬಿಸುತ್ತಿದ್ದ ಆ ಕೆಂಪು ಹಸರು ಕಿವಿಯೋಲೆಗಳು!—ಒಂದೊಂದೂ ಒಂದೊಂದು ಸೌಂದರ್ಯದ ಸಾಮ್ರಾಜ್ಯದಂತೆ ಚಂದ್ರಣ್ಣನ ಕಲ್ಪನೆಗೆ ತೋರಿದುವು. ಪ್ರೇಮಾತಿಶಯದಿಂದ ಅವನೆದೆಯು ಉಬ್ಬು ತ್ತಿತ್ತು. ಆ ಕೋಮಲೆಯೊಡನೆ ತಾನು ನಲಿದಾಡಿದ ಬಾಲ್ಯದ ನೂರಾರು ಸವಿನೆನಪುಗಳನ್ನು ನೆನೆದುಕೊಳ್ಳುವನು :—

ಅಂದು ಪ್ರಾತಃಕಾಲ. ಸೂರ್ಯದೇವನಾಗಲೇ ಬೆಳ್ಳಿ ಬಿಸಿಲನ್ನು ರಂಗೋಲೆಯಿಂದ ಸಿಂಗರವಾದ ಮನೆಯಂಗಳದಲ್ಲಿ ಚೆಲ್ಲಿದ್ದಾನೆ. ಗೌರಮ್ಮನವರು ಬಾಗಿಲಲ್ಲಿ ನಿಂತು ಹರಿಜನರ ಮಾದಿಯೊಡನೆ ಮಾತಾಡುತ್ತಿದ್ದಾರೆ. ಒಳಗೆ ಗಂಗಳದಲ್ಲಿ ಬಡಿಸಿದ್ದ ಬಿಸಿಯನ್ನ ಗಟ್ಟಿಮೊಸರುಗಳನ್ನು ಕಲಸಿಕೊಂಡು ಊಟಮಾಡಿ ಎಂಜಲುಗೈಯನ್ನು ಅರ್ದಂಬರ್ಧ ತೊಳೆದು ಕೊಂಡು ಹನ್ನೆರಡು ವರ್ಷಗಳ ಚಿಕ್ಕ ವಯಸ್ಸಿನ ಚಂದ್ರನು ಹೊರಗೆ ಬಂದನು. ಜಗತಿಯ ಮೇಲೆ ಅಪರಿಚಿತಳಾದ ಸುಮಾರು ಐದುವರ್ಷದ ಮುದ್ದಾದ ಬಾಲಿಕೆಯೊಬ್ಬಳು ಮಲಗಿರುವುದನ್ನು ನೋಡಿದನು. ಆ ಮಗುವಿನ ಚಂದ್ರ ಬಿಂಬದಂತಹ ಮುಖವನ್ನೂ ದುಂಡುದುಂಡಗೆ ಮುದ್ದು ಮುದ್ದಾಗಿದ್ದ ಅಂಗಾಂಗಗಳನ್ನೂ ನೋಡಿ ಅವನಿಗೆ ಅಕ್ಕರೆ ಯುಕ್ಕಿತು. ಅಷ್ಟರಲ್ಲಿ ಆ ಮಗುವು ಕಣ್ಣುಬಿಟ್ಟು 'ಅಣ್ಣಾ!' ಎಂದು ಅಳುವುದಕ್ಕಾರಂಭಿಸಿತು. ಗೌರಮ್ಮನವರು ತಕ್ಷಣ ಅವಳನ್ನೆತ್ತಿಕೊಂಡು, "ನಿಮ್ಮಣ್ಣ ತೋಟದ ಕಡೆ ಹೋಗಿ ದ್ದಾರಮ್ಮ. ಈಗ ಬರುತ್ತಾರೆ. ಅಳಬೇಡಮ್ಮ. ನೀನು ನನ್ನಮ್ಮ! ನನ್ನ ಕಂದ! ನನ್ನ ಅರಗಿಳಿ! ನನ್ನಾನೆ! ಅಳ ಬೇಡಮ್ಮ!" ಎಂದು ಮುಂತಾಗಿ ಅಳುತ್ತಿದ್ದ ಬಾಲಕಿಯನ್ನು ಸಮಾಧಾನ ಮಾಡುತ್ತಾ ಮಾದಿಯೊಡನೆ ಮಾತನ್ನಿನ್ನೂ ಮುಂದುವರಿಸಲು ನಿಂತಳು. ಚಂದ್ರನು ಅವರ ತಾಯಿಯನ್ನು ತಬ್ಬಿಕೊಂಡು "ಅಮ್ಮಾ, ಪಾಪ ಯಾರದಮ್ಮಾ?" ಎಂದು ಕೇಳಿದನು. ಅವನ ಎಂಜಲುಗೈಯಿಂದ ಗೌರಮ್ಮನವರ ಸೀರೆಗೆ ಮೊಸರನ್ನದ ಕರೆಯಂಟಿತು. ಅದನ್ನು ನೋಡಿ ತಾಯಿಯು, "ಏನಪ್ಪಾ ಚಂದ್ರೂ, ಹನ್ನೆರಡು ವರುಷದ

ಹುಡುಗನಾದರೂ ಕೈ ಸರಿಯಾಗಿ ತೊಳೆಯುವುದು ಬರೊಲ್ಲ! ಈ ಹಾಳೂರಲ್ಲಿ ಮಠವಿಲ್ಲ; ಮಸಿಯಿಲ್ಲ. ಮಕ್ಕಳಿಗಿಷ್ಟು ಓದು ಕಲಿಸೋಣವೆಂದರೆ ಅದೃಷ್ಟವಿಲ್ಲ. ಚಂದ್ರೂ, ಶ್ಯಾಮಣ್ಣಯ್ಯ ನವರು ಬಂದಿದ್ದಾರೆ. ನಾಳೆಯಿಂದ ನೀನು ಅವರಲ್ಲಿ ಮುಂದಿನ ಓದು ಕಲಿಯಪ್ಪಾ ಮಹಾರಾಯ. ನನಗೆ ಬರುವಷ್ಟನ್ನೂ ಹೇಳಿಕೊಟ್ಟಿದ್ದೇನೆ. ಅವರೂ ಇನ್ನು ಮುಂದೆ ನಮ್ಮ ಮನೆ ಯಲ್ಲಿಯೇ ಇರುತ್ತಾರೆ." ಎಂದರು. ಹರಿಜನರ ಮಾದಿಯು ಆ ಮಕ್ಕಳಿಬ್ಬರ ಚಲುವನ್ನು ನೋಡಿ ಗೌರಮ್ಮನನ್ನು ಕುರಿತು, "ಅಮ್ಮಯ್ಯಾ, ಚಿಕ್ಕಸ್ವಾಮಿಗೆ ಹೆಣ್ಣು ಹುಡುಕೋದೇ ತಪ್ಪಿತು! ಮುತ್ತಿನಂಥ ಹೆಣ್ಣು ಸಿಕ್ಕೈತೆ. ನಂಟು ಗೋತ್ರ ಹೊಂದಿಕೆ ಯಾಗುತ್ತದೇನಮ್ಮಯ್ಯಾ?" ಎಂದು ನಸುನಕ್ಕಳು. ಗೌರಮ್ಮ ನವರು ಮುಗುಳ್ನಕ್ಕು "ಕುಲ ಗೋತ್ರ ನಂಟು ಎಲ್ಲಾ ಸರಿಯಾಗಿಯೇನೋ ಇದೆ. ಆದರೆ ಯಾರ ಪುಣ್ಯವೋ ಏನೋ ನಾವು ಬಯಸಿದರೆ ಬಂದೀತೇನೆ ಮಾದಿ? ಬ್ರಹ್ಮ ಬರೆದಿದ್ದರೆ ನೀನು ಹೇಳಿದಂತೆಯೇ ಆಗಲಿ." ಎಂದವರು ಅಳುವನ್ನು ಬಿಟ್ಟು ಸ್ವಂತ ತಾಯನ್ನಪ್ಪಿದಂತೆ ಗೌರಮ್ಮನವರ ಕಂಠವನ್ನ ಪ್ಪಿದ್ದ ಮಗುವಿನ ಕೆನ್ನೆಗೆ ಅಕ್ಕರೆಯುಕ್ಕುವಂತೆ ಮುತ್ತಿಟ್ಟರು. ಮಗುವಿನ ಮುಗ್ಧಸ್ನಿಗ್ಧವಾದ ಮುಖದಲ್ಲಿ ಮುಗುಳ್ನಗೆಯರ ಳಿತು. ತನ್ನ ಮಾತಿಗೆ ಇಷ್ಟರಮಟ್ಟಿಗೆ ಮರ್ಯಾದೆ ದೊರಕಿದು ದರಿಂದ ಹರ್ಷಗೊಂಡ ಬಡಮಾದಿಯು "ಬರ್ತೇನಮ್ಮಯ್ಯಾ" ಎಂದು ಹೇಳಿ ತಲೆಬಾಗಿ ಹಿಂತಿರುಗಿ ಹೊರಟುಹೋದಳು. ಮಾದಿಯ ಮಾತಿನಿಂದ ಚಂದ್ರನ ಕೆನ್ನೆಗಳು ನಾಚಿಗೆಯಿಂದ ಕೆಂಪೇರಿದ್ದುವು. ಆದರೆ ಮಾದಿಯು ಮರೆಯಾದೊಡನೆ ಅಮ್ಮನ ಕಂಕುಳಲ್ಲಿ ಕುಳಿತಿದ್ದ ಲಲಿತೆಯ ಕೆಂದಳಿರಿನಂತಿದ್ದ

ಪುಟ್ಟ ಪಾದವನ್ನು ತನ್ನ ತುಟಿಗಳಿಂದ ಮುದ್ದಿಸುತ್ತಾ, "ಅಮ್ಮಾ, ಪಾಪನ್ನ ಕೊಡು. ನಾನು ಎತ್ತಿಕೊಳ್ಳುತ್ತೇನೆ." ಎಂದನು. ಗೌರಮ್ಮನವರು, "ಅಳ್ತಾಳಪ್ಪಾ, ಸುಮ್ಮನಿರು. ತುಂಬಾ ಹಸಿದಿದ್ದಂತೆ ಕಾಣುತ್ತಾಳೆ. ಒಳಕ್ಕೆ ಹೋಗಿ ಉಣ್ಣಿಸಬೇಕು. ನಿಮ್ಮ ಚಿಕ್ಕಪ್ಪ ತೋಟಕ್ಕೆ ಕಪಿಲೆ ಹೂಡಿ ಪ್ದಾರೆ. ನಿಮ್ಮ ಚಿಕ್ಕಮ್ಮ ಬಾಣಂತಿಯಾಗಿ ಕುಳಿತಿದ್ದಾರೆ. ಬಾ, ಬುಟ್ಟಿಯಲ್ಲಿ ಬುತ್ತಿಯನ್ನು ತುಂಬಿಕೊಡುತ್ತೇನೆ. ಹೊತ್ತುಕೊಂಡುಹೋಗಿ ಕೊಟ್ಟು ಬಾ. ಹಾಗೆ ತೋಟದಿಂದ ಮಲ್ಲಿಗೆಹೂವನ್ನೂ ಸಂಪಿಗೆಹೂವನ್ನೂ ಬಿಡಿಸಿಕೊಂಡು ಬಾ. ಪಾಪನಿಗೆ ಸ್ನಾನಮಾಡಿಸಿ ತಲೆಬಾಚಿ ಮುಡಿಸೋಣ." ಎಂದು ಒಳಗೆ ಹೋದರು. ಇದೇ ಚಂದ್ರಣ್ಣನಿಗೂ ಲಲಿತೆಗೂ ಆದ ಪ್ರಥಮ ಪರಿಚಯ.

ಅಂದಿನಿಂದ ಪ್ರಾರಂಭವಾಯಿತು ಚಂದ್ರಣ್ಣ ಲಲಿತೆಯರ ಕಪಲೊಡೆಯದ ಜೊತೆ. ಚಂದ್ರಣ್ಣನೆಲ್ಲಿಗೆ ಹೋದರೂ ಅವನ ಜೊತೆಯಲ್ಲಿ ಲಲಿತೆಯಿರುತ್ತಿದ್ದಳು. ಆರುವರುಷ ತುಂಬುವವರೆಗೂ ಲಲಿತೆಯು ಚಂದ್ರಣ್ಣನೊಡನೆ ಸ್ವಲ್ಪ ದೂರ ಹೋದ ತಕ್ಷಣವೇ, "ನನ್ನನ್ನು ಎತ್ತಿಕೋ ಚಂದ್ರಣ್ಣಾ" ಎಂದು ಹಟಮಾಡುತ್ತಿದ್ದಳು. ಚಂದ್ರಣ್ಣನು ಅವಳನ್ನು ಎತ್ತಿಕೊಂಡು ತನ್ನ ಸೊಂಟದ ಮೇಲೆ ಕೂಡಿಸಿ ಕೊಳ್ಳುವನು. ಲಲಿತೆಯು ತನ್ನ ಪುಟ್ಟ ತೋಳುಗಳಿಂದ ಚಂದ್ರಣ್ಣನ ಕೊರಳನ್ನಪ್ಪಿಕೊಂಡು ಅವನ ಹೆಗಲಮೇಲೆ ಕೆನ್ನೆಯನ್ನಿಟ್ಟುಕೊಂಡು **ಸವಾರಿಯ** ಸುಖವನ್ನನುಭವಿಸು ತ್ತಿದ್ದಳು. ಬೇಸರವಾದಾಗ ಚಂದ್ರಣ್ಣನು ಸ್ವಲ್ಪ ಜೋರಾ ಗಿಯೇ ಕೆಳಗಿಳಿಸಿಬಿಟ್ಟರೆ ಲಲಿತೆಯು ಹಸಿದುಂಬಿದ ತನ್ನ

ಅಗಲವಾದ ಕಣ್ಣುಗಳನ್ನು ಮತ್ತಷ್ಟು ಅರಳಿಸಿ ಪುಟ್ಟ ಬಾಯನ್ನು ಹಿಂಜಿಸಿ ಚಂದ್ರಣ್ಣನ ಎದೆ ಕರಗಿ ನೀರಾಗುವಂತೆ ಅತ್ತುಬಿಡುವಳು. ಚಂದ್ರನು ಅವಳನ್ನು ಮುದ್ದಿಸಿ ಸಮಾಧಾನ ಮಾಡುವುದು ಬಹು ಕಷ್ಟವಾಗುತ್ತಿತ್ತು.

ಇನ್ನೊಂದು ಸಾರಿ:- ಉದಯದ ಹೊಂಬೆಳಕಿನಲ್ಲಿ ಊರಿನ ಬಾಲಕರು ಗೋಲಿಯಾಟವಾಡುತ್ತಿದ್ದಾರೆ. ಊರಿನ ದೇವರ ತೇರು ಅವರಿದ್ದ ಬಳಿಯಲ್ಲಿಯೇ ಚಪ್ಪರದ ಕೆಳಗೆ ನಿಲ್ಲಿಸಲ್ಪಟ್ಟಿತ್ತು. ಅದರ ತೊಲೆಯ ಮೇಲೆ ಚಂದ್ರಣ್ಣನು ಲಲಿತೆಯನ್ನು ಎತ್ತಿ ಕೂಡಿಸಿ ತನ್ನ ನಿಕ್ಕರ್‌ಜೇಬಿನಲ್ಲಿದ್ದ ಕಡಲೇಕಾಯಿಗಳನ್ನು ಅವಳಿಗೆ ಕೊಟ್ಟು ತಾನೂ ಎರಡನ್ನು ಅವಸರವಾಗಿ ಸುಲಿದು ತಿಂದು ಇತರ ಬಾಲಕರ ಜೊತೆಗೆ ಗೋಲಿಯಾಟಕ್ಕಿಳಿದನು. ಆದರೆ ಹುಡುಗರ ಗಮನವೆಲ್ಲಾ ಅಂದು ಬೇರೆ ಕಡೆಗಿತ್ತು. ಸ್ವಲ್ಪ ದೂರದ ಗದ್ದೆಗಳಲ್ಲಿಯೇ ರಾಗಿಯ ಪೈರು ತೆನೆದುಂಬಿ ಹಸುರುಮಂಚ ಕಟ್ಟಿದಂತೆ ನಿಂತಿತ್ತು. ಗುಬ್ಬಚ್ಚಿ, ಗಿಳಿ, ಜೆಕ್ಕುಕ್ಕಿ, ಗೊರವಂಕ ಮುಂತಾದ ಪಕ್ಷಿಗಳ ಸಮೂಹಗಳು ಒಮ್ಮೊಮ್ಮೆ ಹಸುರುಹೊಲದಿಂದ ನೀಲಾಕಾಶಕ್ಕೆ ಬಲೆಯನ್ನೆರಚಿದಂತೆ ಭುರ‍್ರೆಂದು ಹಾರು ತ್ತಿದ್ದುವು. ಮತ್ತೆ ಇನ್ನೊಂದು ಕಡೆ ಹೋಗಿ ತಮ್ಮ ಹಿಂದೆ ಆಕಾರವನ್ನು ಬಯಲುಮಾಡಿ ಕುಳಿತುಬಿಡುತ್ತಿದ್ದುವು. ಉದಯಾಕಾಶದಲ್ಲಿ ಬಣ್ಣದ ಮುಗಿಲಾಡುತ್ತಿದ್ದುವು. ಸ್ವಲ್ಪ ಹೊತ್ತಿನಲ್ಲಿ ಗೋಲಿಯಾಟದಲ್ಲಿ ಸೋತುಹೋದ ಒಬ್ಬ ಹುಡುಗನು ತನ್ನ ಕಲ್ಲುಗೋಲಿಯನ್ನು ಬೀಸಿ ಬೇಲಿಯ ಕಡೆ ಎಸೆದು, "ರಾಗೀ ತೆನೆಗೆ ಹೋಗೋನ ಬರ‍್ರೋ" ಎಂದು ಕೂಗುತ್ತಾ ನಾಗಾಲೋಟದಿಂದ ಓಡಿದನು! ಉಳಿದವರೆಲ್ಲರೂ

ಒಂದೇ ಸಾರಿ ಚಿಮ್ಮಿ ನೆಗೆದು ಅವನಂತೆಯೇ ಗೋಲಿಗಳನ್ನು ಒಗೆದು ಅವನನ್ನು ಹಿಂಬಾಲಿಸಿದರು. ಚಂದ್ರನೂ ಲಲಿತೆಯ ಕೈಯನ್ನು ಎಡಗೈಲಿ ಹಿಡಿದುಕೊಂಡು ಅವಳಿಗೆ ಆಯಾಸ ವಾಗುವಂತೆಯೇ ಜೋರಾಗಿ ಎಳೆದುಕೊಂಡು ಓಡುತ್ತಿದ್ದ ಹುಡುಗರನ್ನು ಹಿಂಬಾಲಿಸಿದನು. ಒಂದು ಕಡೆ ಎಲ್ಲರೂ ರಾಗಿಯ ಪೈರನ್ನು ಹೊಕ್ಕರು. ಹೊಲವನ್ನು ಕಾಯುತ್ತಿದ್ದ ಒಬ್ಬ ಹೆಂಗಸು ದೂರದಿಂದಲೇ ಕೂಗುತ್ತಾ ಬಯ್ಯುತ್ತಾ ಬೀಳುವವಳಂತೆ ಓಡಿಬಂದಳು. ಅವಳು ಬರುವುದರೊಳಗೆ ತಮ್ಮ ತಮ್ಮ ಕೈಗೆ ಬಂದಷ್ಟು ತೆನೆಗಳನ್ನು ಕಿತ್ತುಕೊಂಡು ಹುಡುಗರೆಲ್ಲಾ ಫಲಾಯನ ಮಾಡಿದರು. ಹಿಂದಾಗಿ ಬಂದ ಚಂದ್ರನು ಮಾತ್ರಾ ಇನ್ನೂ ಕೀಳುತ್ತಿದ್ದನು. ಅವನು ಮೊದಲು ಕಿತ್ತುಕೊಟ್ಟಿದ್ದ ಹೊಂಬಣ್ಣದ ಚೆಂಡುಹೂಗಳನ್ನು ಕೈತುಂಬಾ ಹಿಗ್ಗಿನಿಂದ ಹಿಡಿದುಕೊಂಡು ಬದುವಿನ ಮೇಲೆ ನಿಂತಿದ್ದ ಲಲಿತೆಯು ಹೆಂಗಸು ಸಮೀಪಕ್ಕೆ ಧಾವಿಸುತ್ತಿದ್ದು ದನ್ನು ನೋಡಿ ಹೆದರಿ ನಡುಗುತ್ತಾ ಅಳುವುದಕ್ಕಾರಂಭಿ ಸಿದಳು. ಚಂದ್ರನು ಕೀಳುತ್ತಿದ್ದ ತೆನೆಗಳನ್ನು ಪೈರಿನಲ್ಲಿಯೇ ಎಸೆದು ಹೊರಗೆ ಬಂದು, "ನಾನೇನೂ ಕಿತ್ತಿಲ್ಲ ನೋಡು. ಹೂವೊಂದೆ ನಾನು ಕಿತ್ತದ್ದು. ನಮ್ಮ ಪಾಪನ್ನ ಹೊಡೀ ಬ್ಯಾಡ." ಎಂದು ಲಲಿತೆಯನ್ನು ತಬ್ಬಿಕೊಂಡು ಅವಳ ರಕ್ಷಣೆಗಾಗಿ ನಿಂತನು. ಪ್ರಾತಃಸೂರ್ಯನ ಬೆಳಕಿನೆದುರಿಗೆ ಆ ಮಕ್ಕಳಿಬ್ಬರ ಮುದ್ದು ಮುಖಗಳೂ ಆ ಚೆಂಡುಹೂಗಳಿಗಿಂತ ಸುಂದರವಾಗಿ ಹೊಳೆಯುತ್ತಿದ್ದುದನ್ನು ನೋಡಿ ಆ ಹೆಂಗಸಿಗೆ ಎಂತಹ ಆನಂದವಾಯಿತೋ ಏನೋ. "ಆ ತಾಯಿ ನಮ್ಮ ಮ್ಮನ ಹೊಟ್ಟ್ಯಾಗೆ ಊರಿಗೆ ದೇವರವತಾರ ಅನ್ನೋಹಂಗೆ

ಹುಟ್ಟಿದೀಯಪ್ಪಾ ಚಂದ್ರೂ. ನನ್ನ ಹೊಲದಾಗೆ ನಿನಗೆ ನಾಲ್ಕು ತೆನೆ ಗತಿಯಿಲ್ಲವಾ ಕಂದ" ಎನ್ನುತ್ತಾ ತಾನೇ ಕೈತುಂಬಾ ರಾಗಿತೆನೆಗಳನ್ನು ಅವರಿಗೆ ಕಿತ್ತುಕೊಟ್ಟು ಲಲಿತೆಯನ್ನು ಎತ್ತಿಕೊಂಡು, "ಈ ಜೋತಮ್ಮ ಯಾವ ಲೋಕದಿಂದಾ ಬಂತೋ ನಮ್ಮೂರಿಗೆ! ಬಾಳಕಾಲ ಬದುಕು ನನ್ನ ಕಂದಾ!" ಎಂದು ಮುದ್ದಿಸಿ ಇಬ್ಬರನ್ನೂ ಮನೆಗೆ ಕಳಿಸಿದಳು.

ಮತ್ತೊಂದು ಸಾರಿ:—ಕಲ್ಯಾಣದುರ್ಗದಲ್ಲಿ ಮಧ್ಯಮ ಶಾಲೆಯ ಎರಡನೆಯ ತರಗತಿಯಲ್ಲಿ ಲಲಿತೆಯು ಓದುತ್ತಿದ್ದಳು. ಚಂದ್ರನು ಲೋಯರ್ ಸೆಕೆಂಡರಿಯಲ್ಲಿದ್ದನು. ಲಲಿತೆಗಿನ್ನೂ ಒಂಬತ್ತು ತುಂಬುತ್ತಿತ್ತು. ಆ ವರ್ಷ ಪಂದ್ಯಗಳಲ್ಲಿ ಚಂದ್ರಣ್ಣನು ಮೊದಲನೇ ಸಾರಿ ಭಾಗವಹಿಸಿದ್ದನು. ಓಟದಲ್ಲಿಯೂ ಈಜುವುದರಲ್ಲಿಯೂ ಅವನು ಗಟ್ಟಿಗ. ಅಂದಿನ ಓಟದ ಪಂದ್ಯದಲ್ಲಿ ಅಡ್ಡ ಹಾಕಿದ್ದ ಬೆಂಚುಗಳನ್ನು ಚಿಗರಿಯಂತೆ ನೆಗೆದು ಎಲ್ಲರಿಗಿಂತಲೂ ಮುಂದೆ ವೇಗವಾಗಿ ಓಡುತ್ತಿದ್ದನು. ಆ ನೋಟವು ಎಲ್ಲರ ಕಣ್ಣನ್ನೂ ಸೆಳೆದಿತ್ತು. ಗುರಿಮುಟ್ಟಲು ಅರ್ಧ ದಾರಿ ಪೂರೈಸಿತ್ತು. ಅಷ್ಟರಲ್ಲಿ ಅಕ್ಕಪಕ್ಕದಲ್ಲಿ ಪ್ರೇಕ್ಷಕರಾಗಿ ನಿಂತಿದ್ದ ಬಾಲಕಬಾಲಕಿಯರ ಗುಂಪಿನಲ್ಲಿ ನೂಕುನುಗ್ಗಲಾಗಿ ಲಲಿತೆಯು ನೆಲಕ್ಕೆ ಬಿದ್ದುಬಿಟ್ಟಳು. ಓಡುತ್ತಿದ್ದ ಚಂದ್ರಣ್ಣನು ಅದನ್ನು ನೋಡಿದನು. ಆ ಕ್ಷಣವೇ ತನ್ನ ಓಟವನ್ನು ಅಲ್ಲಿಗೇ ನಿಲ್ಲಿಸಿ ಲಲಿತೆಯ ಹತ್ತಿರ ಓಡಿಹೋಗಿ ಅವಳನ್ನು ಎತ್ತಿ ಉಪಚರಿಸತೊಡಗಿದನು. ಲಲಿತೆಯ ಮಂಡಿಯು ಉಜ್ಜಿಹೋಗಿ ಬಟ್ಟೆಯು ರಕ್ತವಾಗಿತ್ತು. ಅವಳು ಗೊಳೋ ಎಂದು ಅಳುತ್ತಿದ್ದುದನ್ನು ನೋಡಿ

ಅವನಿಗೂ ಕಣ್ಣೀರು ಬಂದಿತ್ತು. ಅವನಿಗೆ ಬರುತ್ತಿದ್ದ ಪ್ರಥಮ ಬಹುಮಾನ ಹೋದುದಕ್ಕಾಗಿ ಅವನಿಗೆ ಸ್ವಲ್ಪವೂ ಚಿಂತೆಯಾಗಲಿಲ್ಲ. ನಂತರ ಆವನ ಸ್ಕೌಟು ಉಪಾಧ್ಯಾಯರು ಬಂದು ಲಲಿತೆಯ ಘಾಯಕ್ಕೆ ಮುಲಾಮು ಹಚ್ಚಿ ಬ್ಯಾಂಡೇಜು ಕಟ್ಟಿ ಸಮಾಧಾನಮಾಡಿದರು. ಈಚೆಗೆ ಅನಂತ ಪುರದಲ್ಲಿ ಹೈಸ್ಕೂಲಲ್ಲಿ ಓದುತ್ತಿದ್ದಾಗಲೂ ಲಲಿತೆಯು ಗುರುಪತ್ನಿಯರ ಎದುರಿನಲ್ಲಿ ಚಂದ್ರಣ್ಣನನ್ನು ಅಣಕನೋಟ ದಿಂದ ನೋಡಿ ನಗುತ್ತಾ, "ಚಂದ್ರಣ್ಣಾ, ನನ್ನಿಂದ ನೀನು ಓಟದಲ್ಲಿ ಫಸ್ಟ್ ಪ್ರೈಜ್ ಕಳೆದುಕೊಂಡೆ." ಎನ್ನುತ್ತಿದ್ದಳು. ಆಗ ಗುರುಪತ್ನಿಯು ನಗುತ್ತಾ, "ಪ್ರಥಮ ಬಹುಮಾನ ಹೋದರೆ ಹೋಗಲಿ. ಬೆಲೆಯಿಲ್ಲದ ಬಹುಮಾನವಾದ ನೀನೇ ಅವನಿಗೆ ದೊರಕಿದ್ದೀಯು." ಎಂದು ಅಣಕವಾಡುತ್ತಿದ್ದರು. ಆ ಮಾತನ್ನು ಕೇಳಿ ಲಲಿತೆಯು ಅನುರಾಗಪೂರ್ಣವಾದ ದೃಷ್ಟಿಯಿಂದ ಚಂದ್ರಣ್ಣನನ್ನು ನೋಡುತ್ತಿದ್ದಳು. ಚಂದ್ರಣ್ಣನು ಮಾತ್ರ ಮುಗುಳ್ನಗೆಯಲ್ಲಿಯೇ ಗಾಂಭೀರ್ಯ ವನ್ನು ತಾಳಿ ಕಣ್ಮರೆಯಾಗಿಬಿಡುತ್ತಿದ್ದನು.

ಮತ್ತೊಂದು ಸುಂದರವಾದ ನೆನಪು ಚಂದ್ರಣ್ಣನನ್ನು ಪರವಶನನ್ನಾಗಿ ಮಾಡುತ್ತಿತ್ತು :—ಅಂದು ಯುಗಾದಿಹಬ್ಬ. ಊರಿನ ಸುತ್ತಲೂ ಮಾವು ಬೇವು ಮುತ್ತುಗ ಮುಂತಾದ ವೃಕ್ಷಗಳು ಹೂವುಗಳಿಂದ ತುಂಬಿಹೋಗಿದ್ದುವು. ಊರಲ್ಲಿ ಎಲ್ಲ ಜನರೂ ಹೊಸಬಟ್ಟೆಗಳನ್ನುಟ್ಟುಕೊಂಡು ನಾನಾ ವಿನೋದಗಳಲ್ಲಿ ನಲಿದಾಡುತ್ತಿದ್ದರು. ಪ್ರತಿ ಮನೆಯಲ್ಲಿಯೂ ಅಂದು ಮಡಿ ಮತ್ತು ದೇವರಪೂಜೆ. ಆದುದರಿಂದ ಊರು ತುಂಬಾ ಗಂಟೆಜಾಗಟೆಗಳ ಹರ್ಷಧ್ವನಿಯು ಪ್ರತಿರಣಿತ

ವಾಗುತ್ತಿತ್ತು. ದೇವರ ಗುಡಿಯಲ್ಲಿ ಅಖಂಡಭಜನೆ! ಅಂದು ಗೌರಮ್ಮನವರು ಏಳು ವರ್ಷಗಳ ಲಲಿತೆಗೆ ತಾವೇ ಹೊಲಿಸಿಟ್ಟಿದ್ದ ರೇಷ್ಮೆಯ ಲಂಗ ಗೌನುಗಳನ್ನು ತೊಡಿಸಿದ್ದರು. ಗೌನಿನ ಬಣ್ಣ ಆಕಾಶನೀಲಿ. ಲಂಗದ ಬಣ್ಣ ಗುಲಾಬಿಗೆಂಪು. ಎರಡರ ಅಂಚೂ ಎರಡಂಗುಲದ ಜರತಾರಿ. ತಲೆಯಲ್ಲಿ ನುಣ್ಣನೆ ಬಾಚಿ ಹೆಣೆದ ಎರಡು ಜಡೆಗಳು. ಹಣೆಯಲ್ಲಿ ಕುಂಕುಮ. ಕೆನ್ನೆಗಳಲ್ಲಿ ತೆಳುವಾಗಿ ಸವರಿದ ಅರಿಸಿನ. ಎರಡು ಜಡೆಗಳ ತುದಿಗಳಲ್ಲಿ ಅಪರಂಜಿಬಣ್ಣದ ರೇಷ್ಮೆಯ ರಿಬ್ಬನ್‌ಗಳು. ಜಡೆಗಳ ಬುಡದಲ್ಲಿ ಮಲ್ಲಿಗೆಹೂಗಳ ಸಿಂಬೆ. ಕೊರಳಲ್ಲಿ ಜಾತಿಮುತ್ತುಗಳ ಏಕಾವಳಿ. ಕಿವಿಗಳಲ್ಲಿ ನೇಲುವ ಕೆಂಪ್ರೋಲೆಗಳು. ಕೈಗಳಲ್ಲಿ ಬಂಗಾರದ ಮುರಿಮುರಿಬಳೆಗಳು. ಲಲಿತೆಯು ದೇವಕನ್ಯೆಯನ್ನು ಮೀರಿಸಿದ್ದಳು! ಶ್ಯಾಮಯ್ಯನವರು ತಮ್ಮ ಮಗಳ ಭಾಗ್ಯವನ್ನು ನೋಡಿ ಆನಂದಾಶ್ರುಗಳನ್ನು ಸುರಿಸಿದರು. ಅಂದು ಚಂದ್ರನು ಬೆಳ್ಳನೆಯ ನುಣುಪಾದ ಸ್ಕೌಟ್ ಬನಿಯನ್ನನ್ನೂ ಕಾಕಿ ನಿಕ್ಕರನ್ನೂ ಹಾಕಿಕೊಂಡು ಥೇಟ್ ಸ್ಕೌಟ್ ಹುಡುಗನಂತೆ ಕಾಣುತ್ತಿದ್ದನು. ಯುಗಾದಿ ಕಡೆಯ ಹಬ್ಬದ ದಿನ ಆ ಊರಲ್ಲಿ ದೇವರ ತೇರು, ಅಂದರೆ, **ಉಚ್ಛ್ರಾಯ.** ಆ ಉಚ್ಛ್ರಾಯದ ಬಂಡಿಯಲ್ಲಿ ಚಿತ್ರಮಯವಾದ ಎತ್ತರವಾದ ಉಚ್ಛ್ರಾಯದ ಪರದೆಯ ಮುಂದೆ ಹೂವಿನ ಮಂಟಪದಲ್ಲಿ ಬೆಳ್ಳಿ ಬಂಗಾರಗಳಿಂದ ತಯಾರಾದ ಗ್ರಾಮದೇವತೆ ಆಂಜನೇಯಸ್ವಾಮಿಯ ಉತ್ಸವಮೂರ್ತಿ. ಅದರ ಮುಂದೆ ಮಡಿಯಾಗಿ ಕುಳಿತಿರುವ ಪೂಜಾರಿ. ತೇರಿನ ಮುಂದೆ ಪೆಟ್ರೋಮ್ಯಾಕ್ಸ್ ಲೈಟುಗಳು ಮತ್ತು ಹತ್ತಾರು ಪಂಜುಗಳ ಬೆಳಕಿನಲ್ಲಿ ಜನಸಂದಣಿಯು ಹಾಡು, ಕುಣಿತ, ಭಜನೆ. ಪರಾಕುಗಳಲ್ಲಿ

ಮೈಮರೆತಿದೆ. ಸ್ವನಮೇಳ ಸ್ವನಾಯಗಳ ಶಬ್ದಸಮುದ್ರದ ನಡುವೆ ನಾಲ್ಕು ನಂದಿಧ್ವಜಗಳನ್ನು ಹಿತ್ತಾಳೆಯ ಗಗ್ಗರಿಗಳು ಝುಲ್‌ಝುಲ್ ಎನ್ನುವಂತೆ ಕುಲುಕಿ ಕುಲುಕಿ ಕುಣಿಸುತ್ತಿದ್ದಾರೆ. ತೇರಿನ ಬಂಡಿಗೆ ಬಹಳ ಉತ್ತಮವಾದ ಹೋರಿಗಳನ್ನು ಹೂಡಿದ್ದಾರೆ. ಅವುಗಳ ಮೈಮೇಲೆ ನಾನಾವರ್ಣಗಳ ಹೂವುಗಳನ್ನು ಹೊಲಿದು ಚಿತ್ರಿಸಿದ ಬಣ್ಣದ ಜೂಲುಗಳನ್ನು ಹೊದಿಸಿದ್ದಾರೆ. ಕೋಡುಗಳಿಗೆ ಬೆಳ್ಳಿಯ ಕುಪ್ಪುಗಳನ್ನು ತೊಡಿಸಿದ್ದಾರೆ. ಆ ಕೋಡುಗಳಿಗೂ ವರ್ಣಾಲಂಕಾರವಾಗಿದೆ. ಊರಿನ ಸ್ತ್ರೀಸಮೂಹವೆಲ್ಲಾ ದೂರದಲ್ಲಿ ಕಿಕ್ಕಿರಿದು ನೋಡುತ್ತಿದ್ದಾರೆ. ಅರ್ತಿಯೋ ಅರ್ತಿ! ತೇರಿನ ಹಿಂದುಗಡೆ ಮಾತ್ರ ಚಿಕ್ಕ ಚಿಕ್ಕ ಹುಡುಗರು ಬಂಡಿಯನ್ನು ಹತ್ತುವುದು, ತಳವಾರನ ಆರ್ಭಟದ ಬಯ್ಗಳಿಗೆ ಹೆದರಿ ಇಳಿಯುವುದು, ಮತ್ತೆ ಅವನ ಕಣ್ಣಿಗೆ ನುಸುಳಿ ಮೇಲೆ ಹತ್ತುವುದು—ಈ ಸಡಗರದ ಸಾಹಸದಲ್ಲಿ ತೊಡಗಿದ್ದಾರೆ! ಆದೇನೋ ಈ ಅರ್ತಿಯನ್ನೆಲಾ ನೋಡುವುದಕ್ಕಿಂತ ಹೆಚ್ಚಾಗಿ ಆ ತೇರಿನಬಂಡಿಯ ಮೇಲೆ ಹತ್ತುವುದು ಬಯ್ಸಿಕೊಂಡು ಕೆಳಗಿಳಿಯುವುದು- ಈ ಒದ್ದಾಟವೇ ಬಾಲಕರಿಗೆ ಹೆಚ್ಚು ಸಂತೋಷಕರವಾಗಿರುತ್ತದೆ! ದೊಡ್ಡವರ ಮೆಚ್ಚು ಬಾಲಕರಿಗೆ ಪೆಚ್ಚು! ದೊಡ್ಡವರ ಪೆಚ್ಚು ಅವರಿಗೆ ಮೆಚ್ಚು! ಮೇಲೆ ಹತ್ತುವುದೆಂದರೆ ಅವರಿಗೆ ದೇವರ ಸಮಾನವಾದಂತೆಯೋ ಏನೋ? ಅಥವಾ ಆ ಸಾಹಸವೇ ಅವರಿಗೆ ಲೀಲೆಯೋ ಏನೋ? ಅದಿರಲಿ. ಅಷ್ಟು ಹೊತ್ತಿಗೆ ಚಂದ್ರಣ್ಣನ ಕಕ್ಕ ಚಿಕ್ಕಯ್ಯನು ಮೇಲೆ ವಿವರಿಸಿದಂತೆ ಅಲಂಕೃತರಾದ ಚಂದ್ರಲಲಿತೆಯರನ್ನು ತೇರಿನ ಹತ್ತಿರ ಕರೆದುಕೊಂಡು ಹೋಗಿ ಬಂಡಿಯ ಮೇಲೆ ಉತ್ಸವ

ಮೂರ್ತಿಯ ಮುಂಭಾಗದ ಹಲಗೆಯ ಮೇಲೆ ಹತ್ತಿಸಿ ಕುಳ್ಳಿರಿಸಿದನು. "ಗೌರಮ್ಮನವರ ಮನೆಯ ಮಕ್ಕಳು!" ಎಂದು ಎಲ್ಲರೂ ಸಂತೋಷಚಿತ್ತರಾಗಿ ನೋಡುತ್ತಿದ್ದರೇ ಹೊರತು ಬೇಡವೆಂದವರೊಬ್ಬರೂ ಇಲ್ಲ. ರತ್ನಯ್ಯನವರ ಪತ್ನಿ ಗೌರಮ್ಮನವರೆಂದರೆ ಊರಿನವರೆಲ್ಲರಿಗೂ ಅಷ್ಟು ಭಕ್ತಿ! ಲಲಿತೆ ಚಂದ್ರರು ಒಬ್ಬರನ್ನೊಬ್ಬರು ಹಿಡಿದುಕೊಂಡು ಭದ್ರವಾಗಿ ಕುಳಿತರು. ತೇರು ಹರಿಯುವುದು ಬಹು ನಿಧಾನವಾದುದರಿಂದ ಅವರಿಗೆ ಭಯವಾಗಲಿಲ್ಲ. ಆ ಪಂಜುಗಳ ಮತ್ತು ಪೆಟ್ರೊಮ್ಯಾಕ್ಸ್ ಲೈಟುಗಳ ಪ್ರಕಾಶಮಾನವಾದ ಬೆಳಕಿನಲ್ಲಿ ಸುಂದರವಾದ ಉಡುಪುಗಳನ್ನು ಧರಿಸಿ ಕುಳಿತಿದ್ದ ಅವರು ಕ್ಷಣಕಾಲ ಸ್ವರ್ಗವನ್ನಡರಿ ಕುಳಿತಂತೆಯೇ ಸಂತೋಷಪರವಶರಾಗಿದ್ದರು. ಒಡನೆಯೇ ಅನೇಕ ಬಾಲಕಬಾಲಕಿಯರು ತೇರಿನ ಮುಂದಕ್ಕೆ ಓಡಿಹೋಗಿ ಚಂದ್ರಲಲಿತೆಯರನ್ನು ನೋಡುತ್ತಾ ಮೂಕಮುಗ್ಧರಾಗಿ ತಮ್ಮ ಕಣ್ಣುಗಳನ್ನು ತಣಿಸಹತ್ತಿದರು. ಅದೇಕೋ ಕೆಳಗಿದ್ದ ಒಬ್ಬ ಹುಡುಗನಿಗೂ ಮೇಲೇರಿ ಕುಳಿತಿದ್ದ ಚಂದ್ರಲಲಿತೆಯರನ್ನು ನೋಡಿ ಸ್ವಲ್ಪವೂ ಹೊಟ್ಟೆಯುಕಿಚ್ಚು ಹುಟ್ಟಲಿಲ್ಲ. ಸೌಂದರ್ಯದ ಶಕ್ತಿ ಅಮೇಯವಾದುದೇ ಸರಿ! ಅದರಲ್ಲೂ ಮಕ್ಕಳಲ್ಲಿ ದಿವ್ಯವಾದುದೇ ಸರಿ! ಕೇವಲ ಬುದ್ಧಿಮಾನಸರಲ್ಲಿ ಸೌಂದರ್ಯವು ಕಲಹಕಾಳಿಯಾಗಿದ್ದರೆ ಸರಳಮುಗ್ಧಮಾನಸರಲ್ಲಿ ಅದು ದೈವಾನಂದಶೀಲವಾಗಿದೆ....................

ಇಂತಹ ನೂರಾರು ಬಾಲ್ಯದ ಸವಿನೆನವುಗಳು ಚಂದ್ರಣ್ಣನ ಮನದಲ್ಲಿ ಮತ್ತೆ ಮತ್ತೆ ಸೂರ್ಯೋದಯ ಚಂದ್ರೋದಯಗಳು ಮೂಡಿದಂತೆ ಮೂಡಿ ಸೂರ್ಯಾಸ್ತಮ

ಚಂದ್ರಾಸ್ತಮಗಳು ಮುಳುಗಿಹೋಗುವಂತೆ ಹೊಳೆದು ಹೋಗುತ್ತಿದ್ದುವು. ಇಷ್ಟಲ್ಲದೆ ತನ್ನ ಗುರುವರ್ಯನ ಮತ್ತು ಗುರುಪತ್ನಿಯರ ಜೊತೆಯಲ್ಲಿ ತಾನೂ ಲಲಿತೆಯೂ ಎಷ್ಟು ಸಾರಿ ದೇವಸ್ಥಾನಗಳಿಗೆ ಹೋಗಿ ಬಂದುದು! ಎಷ್ಟು ಹುಣ್ಣಿಮೆಯ ರಾತ್ರಿಗಳಲ್ಲಿ ತೊರೆಯ ಮರುಳುದಿಣ್ಣೆಯ ಮೇಲೆ ಹೋಗಿ ಕುಳಿತು ಬೆಳುದಿಂಗಳೂಟವನ್ನು ಮಾಡಿ ಕೊಂಡು ಬಂದುದು! ಆಹಾ ಮಾನವನ ಬಾಲ್ಯದ ನೆನಪಿ ಗಿಂತಲೂ ಸವಿಯಾದುದು ಈ ಜಗತ್ತಿನಲ್ಲಿ ಮತ್ತೇನಾದರೂ ಉಂಟೇ? ಅಂತಹುದಿದ್ದರೆ ಎರಡರಿಯದೆ ಒಲಿದ ಹೃದಯ ಗಳ ಪ್ರೇಮಸುಧೆಯಲ್ಲದೆ ಮತ್ತೇನಾದರೂ ಆಗಿರಬಹುದೆ? ಅದು ಹೇಗಾದರೂ ಇರಲಿ. ಚಂದ್ರಣ್ಣನು ಇಂತಹ ಭಾವನಾ ಪ್ರಪಂಚದಲ್ಲಿ ಅನೇಕಸಾರಿ ತೇಲುತ್ತಿದ್ದರೂ ಸಹ ಅವನ ಮನಸ್ಸು ಯಾವಾಗಲೂ ಮೋಹದಿಂದ ಬಗ್ಗಡಗೊಳ್ಳಲಿಲ್ಲ. ಆ ಭಾವನಾಲೋಕವು ಅವನ ದಿವ್ಯಾದರ್ಶಗಳ ಮಾರ್ಗಕ್ಕೆ ಓಕುಳಿನೀರನ್ನೆರಚಿ ತಂಪುಗೈಯುತ್ತಿತ್ತು. ಸಂತೋಷಗೊಳಿಸು ತ್ತಿತ್ತು. ಉತ್ಸಾಹವನ್ನು ತುಂಬುತ್ತಿತ್ತು. ತನ್ನ ಗುರುವರ್ಯನ ದಿವ್ಯಬೋಧೆಗಳಿಂದ ಅವನು ನಿತ್ಯವೂ ಜೀವನದ ಸಮಸ್ಯೆ ಗಳನ್ನು ದೀರ್ಘವಾಗಿ ಆಲೋಚಿಸುತ್ತಾ ಅವರ ಗಭೀರತೆ ಯನ್ನು ಚಿಂತಿಸುತ್ತಿದ್ದನು. ಜೊತೆಗೆ ತನ್ನ ಪಾಠಪ್ರವಚನಗಳ ಕಡೆ ತುಂಬಾ ಗಮನವಿಟ್ಟು ವ್ಯಾಸಂಗ ಮಾಡುತ್ತಿದ್ದನು.

ಇತ್ತ ಊರಲ್ಲಿದ್ದ ಲಲಿತೆಯ ಭಾವನುಯವೂ ಅರಳು ತ್ತಿತ್ತು. ಚಂದ್ರಣ್ಣನ ಚಿತ್ತಭಿತ್ತಿಯಲ್ಲಿ ಮೂಡುತ್ತಿದ್ದ ಸವಿ ನೆನಪುಗಳೆಲ್ಲವೂ ಲಲಿತೆಯ ಸ್ಮೃತಿಪಥದಲ್ಲಿಯೂ ವಿಹರಿಸು ತ್ತಿದ್ದುವು. ಆದರೆ ಲಲಿತೆಯ ಭಾವಗಗನದಲ್ಲಿ ಇಂದಿನ

ಚಂದ್ರಣ್ಣನ ತಾರುಣ್ಯಪೂರ್ಣವಾದ ವ್ಯಕ್ತಿತ್ವವೇ ಹೆಚ್ಚಾಗಿ ವಿರಾಜಿಸುತ್ತಿದ್ದಿತೆಂದರೆ ತಪ್ಪಾಗಲಾರದು. ಅದಕ್ಕೆ ಕಾರಣ ವೆಂದರೆ ಹುಣ್ಣಿಮೆಯ ಚಂದ್ರನಂತೆ ಪೂರ್ಣವೃದ್ಧಿಯನ್ನು ಪಡೆದಿದ್ದ ಅವಳ ಯೌವನಾವಸ್ಥೆ. ಅವಳು ಆ ತನ್ನ ಸೌಂದರ್ಯ ಮೂರ್ತಿಯಾದ ಚಂದ್ರಣ್ಣನನ್ನು ಸಾವಿರಾರು ಸಂದರ್ಭ ಗಳಲ್ಲಿ ಎದೆದುಂಬಿದ ಪ್ರೀತಿಯ ನೋಟದಿಂದ ನೋಡಿದವ ಳಾದುದರಿಂದ ಆತನ ತೇಜೋಸ್ಫಿತವೂ ಸತ್ವಪೂರ್ಣವೂ ದಿವ್ಯಸುಂದರವೂ ಆದ ವದನಾರವಿಂದವು ಅವಳ ಹೃದಯ ಮಂದಿರದಲ್ಲಿ ಅಚ್ಚಳಿಯದೆ ಕೆತ್ತಿದಂತಿತ್ತು. ಅಂತಹ ಸಜೀವ ಚಿತ್ರಕ್ಕೆ ಬೇರೆ ಅವಲಂಬನವೇಕೆ? ಅವಳು ಒಮ್ಮೊಮ್ಮೆ ಆ ತನ್ನ ಜೀವಿತೇಶ್ವರನನ್ನು ನೆನೆದು ಪ್ರೇಮನಿರ್ಭರತೆಯಿಂದ ಮನದಲ್ಲಿಯೇ ವಿಧವಿಧವಾಗಿ ಪೂಜಿಸುತ್ತಿದ್ದಳು: ಒಮ್ಮೆ, ಬಾಲಸೂರ್ಯನಂತೆ ಹೊಳೆಯುವ ಚಂದ್ರಣ್ಣನ ವದನವನ್ನೇ ಧ್ಯಾನಿಸುತ್ತಾ ಅವನ ಮುಂಗುರುಳನ್ನು ತನ್ನ ಕೋಮಲ ವಾದ ಬೆರಳುಗಳಿಂದ ನೇವರಿಸುವಳು. ಆ ಸುಂದರವಾದ ಹಣೆಯನ್ನು ತಾಯಿಯಂತೆ ತನ್ನ ಕೆನ್ನೆಗೊತ್ತಿಕೊಂಡು ಮುಂಡಾಡುವಳು. ತುಂಬಿ ಹೊಳೆಯುವ ಆ ಕೆನ್ನೆಗಳನ್ನು ಮಗುವಿನಂತೆ ಮುದ್ದಿಸುವಳು. ತೇಜಃಪುಂಜವಾದ ಆ ನೇತ್ರ ಗಳನ್ನು ಮೋಹಮಾಧುರ್ಯವು ತುಳುಕುತ್ತಿದೆಯೋ ಎಂಬಂತೆ ನೋಡುವಳು. ಶಂಖದಂತೆ ಮನೋಹರವಾಗಿದ್ದರೂ ಸಿಂಹ ದೃಢವಾದ ಆ ಕಂಠವನ್ನು ತನ್ನ ಬಳ್ಳಿದೋಳುಗಳಿಂದ ಸೀನೇ ಸರ್ವಗತಿಯೆಂಬಂತೆ ಆಲಿಂಗನಮಾಡಿಕೊಳ್ಳುವಳು. ಹೃದ ಯಕ್ಕೆ ಹೃದಯವು ಬೆಸುಗೆಯಾಗಲು ಪ್ರೇಯಸಿಯಂತೆ ಆ ತನ್ನ ಹೃದಯೇಶ್ವರನ ತುಟಿಗಳನ್ನು ತನ್ನ ಬಿಂಬಾಧರಗಳಿಂದ

ಚುಂಬಿಸುವಳು. ಮತ್ತೆ ನಾಚಿ ತಲೆಬಾಗಿ ಆ ತನ್ನ ಪುರುಷ ಸಿಂಹನ ವಿಶಾಲವಾದ ವಕ್ಷಸ್ಥಲದಲ್ಲಿ ತನ್ನ ಚಂದ್ರವದನವನ್ನು ಬಚ್ಚಿಟ್ಟು ಆತ್ಮಾನಂದಪರವಶಳಾಗುವಳು. ಮತ್ತೊಮ್ಮೆ ಆ ತನ್ನ ದೇವಮೂರ್ತಿಯ ಸಿಂಹಗಾಂಭೀರ್ಯವನ್ನೂ ಉಜ್ವಲ ಸಂಯಮವನ್ನೂ ಅನನ್ಯಸಾಧಾರಣವಾದ ಧ್ಯಾನಶೀಲತೆ ಯನ್ನೂ ನೆನೆದು ತನ್ನ ತರಳಚೇಷ್ಟೆಗಳಿಗಾಗಿ ತಾನೇ ಹೆದರಿ ಭಯಭಕ್ತಿಗಳಿಂದ ಕುಸಿದವಳಾಗಿ ಭಕ್ತಾಗ್ರಣಿಯು ತನ್ನ ಇಷ್ಟದೇವತೆಗೆ ನಮಸ್ಕರಿಸುವಂತೆ ಸಾಷ್ಟಾಂಗವೆರಗುವಳು. ತಕ್ಷಣವೇ ಪ್ರೇಮನಿರ್ಭರತೆಯಿಂದ ಆತನ ಚರಣಸರಸಿಜ ಗಳನ್ನು ತಬ್ಬಿಕೊಂಡು ಅವುಗಳಿಗೆ ತನ್ನ ಹಣೆ ಕೆನ್ನೆ ತುಟಿ ಗಳನ್ನು ಸೋಂಕಿಸಿ ಆನಂದಾಶ್ರುಗಳಿಂದ ತೊಯ್ಸಿಬಿಡು ತ್ತಿದ್ದಳು. ಅಂತಹ ಅಪೂರ್ವಮುಹೂರ್ತಗಳಲ್ಲಿ ಲಲಿತೆಯು ದೀರ್ಘಕಾಲ ತನ್ನನ್ನೇ ತಾನು ಮರೆತು ಅದಾವುದೋ ಆನಂದಮಯವಾದ ಲೋಕದಲ್ಲಿ ತೇಲಿ ಓಲಾಡುತ್ತಿದ್ದಳು. ಅವಳ ಬಗೆಯಿಂದ ಮೂರುಲೋಕಗಳೂ ಜಾರಿ ಚಂದ್ರಣ್ಣನ ವ್ಯಕ್ತಿತ್ವವೊಂದೇ ರಾರಾಜಿಸುತ್ತಿದ್ದಿತು. ಪ್ರೇಮಶಿಖರವ ನ್ನೇರಿದ ಇಂತಹ ಪರಿಶುದ್ಧ ಮುಹೂರ್ತಗಳು ಅವಳ ಭಾವಜೀವನದಲ್ಲಿ ಹಾಸುಹೊಕ್ಕಾಗಿ ತುಂಬಿದುವು. ಎಲ್ಲದ ಕ್ಕಿಂತ ಹೆಚ್ಚಾಗಿ ಅವಳಿಗೆ ನಿತ್ಯವೂ ಒಂದು ದಿವ್ಯವಾದ ಕನಸು ಬೀಳುತ್ತಿತ್ತು. ಆ ಕನಸನ್ನು ಇಲ್ಲಿ ಸಂಕ್ಷೇಪವಾಗಿ ಚಿತ್ರಿಸಬಹುದು :—

ಹುಣ್ಣಿಮೆಯ ನಡುರಾತ್ರಿ. ಪೂರ್ಣಚಂದ್ರನು ನಿಲಾ ಕಾಶದ ಮುಡಿಯಲ್ಲಿ ಬೆಳಗುತ್ತಿದ್ದಾನೆ. ಸುಪ್ತಜಗತ್ತೆಲ್ಲಾ ಬೆಳುದಿಂಗಳ ಹಾಲ್ಗನಸಿನಲ್ಲಿ ಮುಳುಗಿಹೋದಂತಿದೆ. ಮಾಘ

ಮಾಸ. ಮರಗಿಡಬಳ್ಳಿಗಳೆಲ್ಲವೂ ಹೂಗಳಿಂದ ಸಿಂಗರಗೊಂಡಿರುವ ಒಂದು ವನ. ಆ ವನದ ನಡುವೆ ಎಳೆಯ ಕೂಸಿನ ಕಣ್ಣುಗಳಂತೆ ಮಿಂಚುತ್ತಾ ಒಂದು ಸಲಿಲವಾಹಿನಿಯು ಶಾಂತವಾಗಿ ಹರಿಯುತ್ತಿದೆ! ಆ ನದಿಯಲ್ಲಿ ಮಲ್ಲಿಗೆಹೂಗಳಿಂದಲಂಕೃತವಾದ ಒಂದು ದೋಣಿ! ಅದರಲ್ಲಿ ಲಲಿತೆಯೂ ಚಂದ್ರಣ್ಣನೂ ಅಕ್ಕಪಕ್ಕದಲ್ಲಿ ಕುಳಿತಿದ್ದಾರೆ! ನೊರೆಬಣ್ಣದ ಧವಳಶುಭ್ರವಾದ ಉಡುಪುಗಳನ್ನು ಧರಿಸಿದ್ದಾರೆ. ಲಲಿತೆಯ ಜಡೆಯ ತುಂಬಾ ಮಲ್ಲಿಗೆಯ ಹೂವೆ! ತೊರೆಯ ತುಂತುರು ವನಿಗಳು ಸಿಡಿದು ಅವರ ಮೈಗೆ ಸೋಂಕಿ ರೋಮಾಂಚನವುಂಟುಮಾಡುತ್ತಿವೆ. ಸ್ವಲ್ಪಹೊತ್ತಿನಲ್ಲಿಯೇ ಅವರ ದೋಣಿಯು ಮೆಲ್ಲಮೆಲ್ಲನೆ ತೇಲುತ್ತಾ ಅನಂತವಾದ ನೀಲಿಸಾಗರವನ್ನು ಸೇರುತ್ತದೆ! ವಿಶ್ವವೆಲ್ಲವೂ ಬೆಳ್ಳಿಯ ಪದರುಗಳಿಂದ ಮಿಂಚುವ ಅಲೆ ಅಲೆ ಅಲೆಗಳ ಅನಂತನೀಲಿಯಾಗುತ್ತದೆ! ಆ ಅನಂತಸಾಗರದಲ್ಲಿ ಅವರ ಮಲ್ಲಿಗೆಯ ದೋಣಿಯು ನೆಲವನ್ನಗಲಿ ಬಹುದೂರ ಹೋಗುತ್ತದೆ. ಎತ್ತ ನೋಡಿದರೂ ಬೆಳುದಿಂಗಳಲ್ಲಿ ಮೈತೊಳೆದ ತೆರೆಗಳು, ತೆರೆಗಳು! ಮೇಲೆ ನಗುತ್ತಿರುವ ರಾಕಾಶಶಾಂಕರೋಚಿ! ನಕ್ಷತ್ರಗಳಿಂದ ಶೋಭಿಸುತ್ತಿರುವ ಅನಂತಾಕಾಶದ ನೀಲಿ! ಕೆಳಗೆ ಅನಂತಸಾಗರದ ನೀಲಿನರ್ತನ! ಲಲಿತೆಗೆ ಆ ವಿವಿಕ್ತದೇಶದ ಒಂಟಿತನದಿಂದ ಸ್ವಲ್ಪ ಭಯವುಂಟಾದರೂ ಪಕ್ಕದಲ್ಲಿ ತುಂಬುಗಾಂಭೀರ್ಯದಿಂದ ಕುಳಿತು ಧ್ಯಾನಮಗ್ನನಾಗಿ ಮತ್ತೊಂದು ರಾಕಾಶಶಾಂಕರೋಚಿಯಂತೆ ರಾರಾಜಿಸುತ್ತಾ ತನ್ನ ಮುಖಮಂಡಲದಲ್ಲಿ ದಿವ್ಯಾನಂದಸೂಚಕವಾದ ಮುಗುಳ್ನಗೆಯನ್ನು ಬೀರುತ್ತಿರುವ ಚಂದ್ರಯ್ಯದೇವನನ್ನು ನೋಡಿ ಅವಳ ಅಲ್ಪಭಯವು ಮಾಯ

ವಾಗಿ ಅಲೌಕಿಕವಾದ ಆನಂದವನ್ನು ಅನುಭವಿಸುವಳು. ನಂತರ ಲಲಿತೆಯು ಮುಗುಳ್ನಕ್ಕು, "ಸ್ವಾಮೀ, ನೀವು ಆ ಪೂರ್ಣಚಂದ್ರನೇ ಆಗಿದ್ದೀರಿ!" ಎನ್ನುವಳು. ಮುಗುಳ್ನಗೆಯು ಮಲರಿದ ಚಂದ್ರಣ್ಣನು, "ದೇವೀ, ನೀನು ಈ ಬೆಳುದಿಂಗುಳೇ ಆಗಿದ್ದೀಯೆ!" ಎಂದು ಉತ್ತರಕೊಡುವನು. ಲಲಿತೆ, "ನೀವು ಗಗನದಲ್ಲಿದ್ದೀರಿ!" ಎನ್ನುವಳು. ಚಂದ್ರಣ್ಣ, "ನೀನು ಗಗನವನ್ನೂ ತುಂಬಿ ಭೂಮಿಯನ್ನೂ ತುಂಬಿದ್ದೀಯೆ." ಎನ್ನುವನು. ಲಲಿತೆ, "ಭೂಮಿಯನ್ನಪ್ಪಿದ ಬೆಳುದಿಂಗಳು ಚಂದ್ರನನ್ನಗಲಿ ದೂರವಾಗಿವೆಯಲ್ಲಾ?" ಎಂದು ಕಾತರಸ್ವರದಿಂದ ಕೇಳುವಳು. ಚಂದ್ರಯ್ಯನು, "ಚಂದ್ರನಿಂದಲೇ ಹೊರಟ ಬೆಳುದಿಂಗಳು ಭೂಮಿಯ ವರೆಗೂ ಹರಿದು ಬಂದಿದ್ದರೂ ಚಂದ್ರನಿಂದ ಬೇರೆಯಾಗಿಲ್ಲ ದೇವೀ" ಎನ್ನುವನು. **ಬೇರೆ** ಎಂಬ ಶಬ್ದದಿಂದ ಲಲಿತೆಗೆ ಏನೇನೋ ಭಾವಗಳು ಮೂಡಿ ಭಯವಾಗುವುದು! ಕನಸೊಡೆಯುವುದು! ಅಷ್ಟು ಸುಂದರವೂ ಆನಂದಕರವೂ ಆದ ಕನಸು ತನ್ನ ಭಯದಿಂದಲೇ ನಿಂತುಹೋದುದಕ್ಕೆ ಲಲಿತೆಯು ಪಶ್ಚಾತ್ತಾಪ ಪಡುವಳು. ಇನ್ನೊಮ್ಮೆ ಆ **ಬೇರೆ** ಎಂಬ ಶಬ್ದಕ್ಕೆ ಅಂಜಬಾರದೆಂದು ನಿರ್ಧರಿಸಿಕೊಳ್ಳುತ್ತಾಳೆ. ಆ **ಬೇರೆ** ಎಂಬ ಶಬ್ದಕ್ಕೆ **ಆಗಿಲ್ಲ** ಎಂಬ ಶಬ್ದವನ್ನೂ ಜೋಡಿಸಿ ಧೈರ್ಯತಂದುಕೊಳ್ಳುತ್ತಾಳೆ. ಅದರಿಂದ ತನ್ನ ಜೀವಿತದಲ್ಲಿ ಚಂದ್ರಣ್ಣನನ್ನು ಎಂದೆಂದಿಗೂ ಅಗಲುವುದಿಲ್ಲವೆಂಬ ಆತ್ಮವಿಶ್ವಾಸವನ್ನು ತಾಳುತ್ತಾಳೆ. ಇದರಿಂದ ತಂದೆಯ ನುಡಿಗಳಿಂದುಂಟಾಗಿದ್ದ ನೋವನ್ನು ಮರೆಯಲೆತ್ನಿಸುತ್ತಾಳೆ. ಪರೀಕ್ಷೆ ಪೂರೈಸಿ ಬೇಸಿಗೆ ರಜವು ಬಂದು ಚಂದ್ರಣ್ಣನು ಎಂದು ಊರಿಗೆ ಬಂದಾನು

ಎಂದು ಹಾರೈಸಿಕೊಳ್ಳುತ್ತಾಳೆ. ಚಂದ್ರಣ್ಣನನ್ನು ಯಾವಾಗ ನೋಡಿಯೇನು ಎಂದು ಕಾತರಗೊಳ್ಳುತ್ತಾಳೆ. ಅವಳ ನಿತ್ಯ ನಿರೀಕ್ಷಣೆಯ ನಿಶಿತಧಾರೆಯ ಮೇಲೆ ಬೇಸಗೆಯು ಲೀಲೆ ಯಾಡುತ್ತಲೇ ಬಂದಿತು. ನಾಳೆಯೇ ಚಂದ್ರಣ್ಣನು ಬರುವ ದಿನ !



# ಆರನೆಯ ದಳ

## ಪ್ರೇಮಪೂಜೆ

ಪೆಣ್ಣೊಲಿದ ನಲ್ಲನಿರೆ, ಗಂಡೊಲಿದ ನಲ್ಲೆಯಿರೆ,
ಸಿರಿಬಾಳ್ತೆ ಸಿಂಗಾರ ಸೊಗಕೆ ಹೊಯಿಕೈಯಿಹುದೆ ಪೇಳ್
ಬದುಕಿನಲಿ ?.......................................

—ಕುವೆಂಪು.

ಬಾರ ಬಾರಾ ನನ್ನ ದೊರೆಯೇ
ಪ್ರಾಣಪದ್ಮದ ಪೀಠಕೆ ;
ಇನಿತು ನಿರ್ಮಲಗೈದೆ ಮನೆಯನು
ನಿನ್ನ ಪೂಜಿಸುವಾಟಕೆ !

—ಕುಮುದ.

ಲಲಿತೆಯು ಹೊತ್ತು ಹುಟ್ಟುವುದಕ್ಕಿಂತ ಮುಂಚೆಯೇ ಎದ್ದು ಹಂಡೆಯ ತುಂಬಾ ನೀರು ಕಾಯಿಸಿದಳು. ಶ್ಯಾಮಯ್ಯನವರು ಮೊದಲು ಸ್ನಾನಮಾಡಿ ಮಡಿಯುಟ್ಟು ದೇವರ ಪೂಜೆಗೆ ಹೂವು ತರಲು ಹೂಬುಟ್ಟಿಯೊಂದಿಗೆ ತೋಟದ ಕಡೆ ಹೋದರು. ಈ ಕಡೆ ಲಲಿತೆಯು ಒಂದು ಪುಷ್ಕಳವಾದ ಅಭ್ಯಂಜನಸ್ನಾನವನ್ನು ಮಾಡಿದಳು. ನಂತರ ತಲೆಗೂದಲನ್ನು ಚೆನ್ನಾಗಿ ಒರಸಿಕೊಂಡಳು. ಅದು ಇನ್ನೂ ಸ್ವಲ್ಪ ತೇವವಾಗಿದ್ದುದರಿಂದ ಶುಭ್ರವಾದ ಬಿಳಿಯ ಒಣವಸ್ತ್ರದಲ್ಲಿ ಮೇಲಕ್ಕೆತ್ತಿ ಕಟ್ಟಿದಳು. ಪೂಜಾಸಮಯಗಳಿಗಾಗಿ ಯಾವಾಗಲೂ ಮಡಿಮಾಡಿ ಪವಿತ್ರವಾಗಿ ತನ್ನಲ್ಲಿ ಬಚ್ಚಿಟ್ಟುಕೊಂಡಿದ್ದ ಅತ್ಯುತ್ತಮವಾದ ಒಂದು ಬಿಳಿಯ ನಾರುಸೀರೆಯನ್ನು ಉಟ್ಟುಕೊಂಡಳು. ನಂತರ ದೇವರ ಕೋಣೆಗೆ ಹೋದಳು. ಅಲ್ಲಿ ಸುತ್ತಲೂ

ಗೋಡೆಗಳಲ್ಲಿ ಅನೇಕ ದೇವರ ಪಟಗಳೂ ಮತ್ತು ಭಗವಾನ್ ಬುದ್ಧ, ಶ್ರೀರಾಮಕೃಷ್ಣ, ಶ್ರೀ ವಿವೇಕಾನಂದ, ಮಹಾತ್ಮಾ ಗಾಂಧಿ—ಮುಂತಾದ ಭವ್ಯಾತ್ಮರ ವರ್ಣಪಟಗಳೂ ಸಿಂಗರಿಸಲ್ಪಟ್ಟಿದ್ದುವು. ಅವುಗಳ ಕೆಳಗೆ ಒಂದು ಸುಂದರವಾದ ಕಾಲುಮಣೆಯ ಮೇಲೆ ಅಮೃತಶಿಲೆಯಲ್ಲಿ ಕಡೆದ ಸೀತಾಲಕ್ಷ್ಮಣ ಹನುಮತ್ಸಮೇತನಾದ ಶ್ರೀರಾಮದೇವನ ವಿಗ್ರಹವು ಇಡಲ್ಪಟ್ಟಿತ್ತು. ನಿನ್ನೆ ಮಾಡಿದ ಪೂಜೆಯ ಗುರುತುಗಳಾಗಿ ಅರಿಸಿನ ಕುಂಕುಮ ಹೂವುಗಳ ಅವಶೇಷಗಳಿನ್ನೂ ಅಲ್ಲಿದ್ದುವು. ಲಲಿತೆಯು ಆ ವಿಗ್ರಹವನ್ನು ಕಂಡಕೂಡಲೆ ಅನನ್ಯಭಕ್ತಿಯಿಂದ ಅದರ ಮುಂದೆ ನೆಲದ ಮೇಲೆ ಸಾಷ್ಟಾಂಗವೆರಗಿ ಮಂಡಿಯೂರಿ ಕುಳಿತಳು. ಆ ವಿಗ್ರಹವು ಚಂದ್ರಣ್ಣನು ಒಮ್ಮೆ ಮದರಾಸಿಗೆ ಹೋದಾಗ ಲಲಿತೆಯ ಅಭಿಲಾಷೆಯಂತೆ ಹುಡುಕಿ, ಕೊಂಡು, ತಂದುಕೊಟ್ಟುದು. ರವಿವರ್ಮನ ಕೋದಂಡರಾಮನ ವರ್ಣಚಿತ್ರವನ್ನೇ ಶಿಲ್ಪಿಯು ಒಂದೇ ಒಂದು ಅಮೃತಶಿಲೆಯಲ್ಲಿ ಬಹು ಮುದ್ದಾಗಿ ಬಿಡಿಸಿದ್ದನು. ರಾಮ ಲಕ್ಷ್ಮಣ ಸೀತೆ ಆಂಜನೇಯರು ಮಾತ್ರವಲ್ಲದೆ ಅವರ ಹಿನ್ನೆಲೆಯಲ್ಲಿ ಶ್ವೇತಚ್ಛತ್ರಿಯಿಂದೊಡಗೂಡಿದ ರತ್ನಸಿಂಹಾಸನವನ್ನೂ ಒಂದೇ ಕಲ್ಲಿನಲ್ಲಿ ಬಿಡಿಸಿದ್ದನು. ಅದೊಂದು ಅಪೂರ್ವವಾದ ಶಿಲ್ಪಕೃತಿಯೇ ಸರಿ. ಲಲಿತೆಯು ರಾಮಸೀತೆಯರ ಸ್ನಿಗ್ಧಮನೋಹರವಾದ ಮಂದಸ್ಮಿತ ವದನಾರವಿಂದಗಳನ್ನು ನೋಡುತ್ತಾ ನೋಡುತ್ತಾ ಚಂಪ್ರಣ್ಣನನ್ನು ನೆನೆದು ಪ್ರೇಮಾರ್ತಹೃದಯಳಾಗಿ ಕೈಜೋಡಿಸಿದಳು. ಹಾಗೆಯೇ ಅವಳ ವಿಶಾಲವಾದ ನೇತ್ರಗಳು ಮುಚ್ಚಿಕೊಂಡವು. ತುಂಬು ಶಶಿಯ ಮುಂದೆ ಬಿಳಿಯ ತಾವರೆ ಹೂವು ಮುಚ್ಚಿಕೊಂಡಂತಿತ್ತು

ಅವಳ ನೋಟ. ಒಂದೆರಡು ನಿಮಿಷಗಳ ಮೌನವು ಕಳೆಯು ವುದರೊಳಗೆ ಅವಳ ಮುದ್ದಾದ ತುಟಿಗಳಿಂದ ಮೆಲ್ಲಮೆಲ್ಲನೆ ಕಲಕಂಠಸ್ವರದಲ್ಲಿ ಭಾವಗೀತವೊಂದು ಹೊರಹೊಮ್ಮಿತು. ಆ ಕಂಠವಲ್ಲಿ ದೀನಹೃದಯದ ಮರುಕ ತುಂಬಿತ್ತು :

ಬಣ್ಣ ಬಳಿಸಿದೆ ಸುಣ್ಣ ಬಳಿಸಿದೆ
  ನನ್ನ ಬಾಳಿನ ಕೋಣೆಗೆ ;
ಧೂಳು ಕಸವನು ಗುಡಿಸಿನೀರೊಳು
  ತೊಳೆದು ನಿರ್ಮಲಗೈಸಿದೆ.
ದೇವಲೋಕದ ದಿವ್ಯಪುರುಷರೆ
  ಸುಣ್ಣ ಬಳಿಯಲು ಬಂದರು !
ಪ್ರೇಮದೇವಿಯೆ ಪೊರಕೆ ಹಿಡಿಯುತ
  ಕಸವ ಗುಡಿಸಲು ಬಂದಳು !
ದೇವಗಂಗೆಯೆ ನೀರು ತಂದಳು
  ತೊಳೆದು ಪಾವನಗೈದಳು !
ಎನಿತು ಕರುಣೆಯೊ ಕಂದನಲಿ
  ಮೋಹನಿತು ಮೋಹನೊನರರಲಿ.
ಪತಿತರನಿತಾಶಿಸಿದ ಗಳಿಗೆಯೆ
  ಸೇವೆಗೈವರು ದಿವಿಜರು !
ಕಾಂತಿಗುಂದಿದ ಭಾವಗಳು ಹೊಸ
  ಕಾಂತಿಯಲಿ ನಗುತಿರುವುವು :
ಕಾಮಕಲುಷಿತ ಕಸವದೆಲ್ಲವು
  ದೂರವಾಗಿವೆ ಬಾಳೊಳು.
ಪ್ರೇಮಗಂಗೋದಕದ ಸ್ರೋತದಿ
  ಪುಣ್ಯವಾಗಿದೆ ಜೀವವು :

ಹೀನವಿಷಯಗಳಿಣಿಕಿ ನೋಡವು
ಬೆದರಿ ಓಡಿವೆ ಬಾರವು!
ಎದೆಯದೇಗುಲದಲ್ಲಿ ಹೊಳೆಯುವ
ಬೆಳಗುದೀವಿಗೆ ಮುಡಿಸಿದೆ;
ಶಾಂತಿಸಿಂಹಾಸನಕೆ ನಿನ್ನಯ
ಬರವ ಜೀವವು ಕಾದಿದೆ.
ಬಾರ ಬಾರಾ ನನ್ನ ದೊರೆಯೇ,
ಪ್ರಾಣಪದ್ಮದ ಪೀಠಕೆ:
ಇನಿತು ನಿರ್ಮಲಗೈದೆ ಮನೆಯನು
ನಿನ್ನ ಪೂಜಿಸುವಾಟಕೆ!

ಹಾಡು ಮುಗಿಯುವುದರೊಳಗೆ ಲಲಿತೆಯ ಮುಚ್ಚಿದ ಎವೆಗಳ ತುಂಬಾ ಅಶ್ರುಬಿಂದುಗಳು ತುಂಬಿ ಕೆನ್ನೆಗಳು ಕಣ್ಣೀರಿನಲ್ಲಿ ತೊಯ್ದುವು. ಹಾಗೆಯೇ ಒಂದು ಗಳಿಗೆ ಗೀತೆಯ ರಸಾನಂದದಲ್ಲಿ ನಿಟ್ಟುಸಿರೆಳೆಯುತ್ತಾ ಮೌನವಾಗಿದ್ದವಳು ತಟ್ಟನೆ ಎಚ್ಚತ್ತವಳಂತೆ ಬೆದರಿ ಮೇಲೆದ್ದಳು. ಹೊರಗೆ ತನ್ನ ತಂದೆಯು ಬರುತ್ತಿರುವ ಸಪ್ಪಳವಾಯಿತು. ರಾಮಯ್ಯನವರು ದೇವರ ಕೋಣೆಗೆ ಬಂದಮೇಲೆ ಲಲಿತೆಯು ತಂದೆಗೆ ದಾರಿಬಿಟ್ಟು ಓರೆಯಾಗಿ ತಲೆಬಾಗಿ ನಡೆಯುತ್ತಾ ಅವಸರವಾಗಿ ತನ್ನ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು. ನಂತರ ಉಟ್ಟಿದ್ದ ನಾರುಮಡಿಯನ್ನು ಬಿಟ್ಟು ಗೌರಮ್ಮನವರು ತನಗಾಗಿ ಕೊಂಡುಕೊಟ್ಟಿದ್ದ ಅಪರಂಜಿಬಣ್ಣದ ಮೈಸೂರು ರೇಷ್ಮೆಯ ಮೃದುವಾದ ಸೀರೆಯನ್ನುಟ್ಟಳು. ಅದರ ಒಂದಂಗುಲದ ಜರತಾರಿ ಅಂಚು ಸೀರೆಗಿಂತ ಹೆಚ್ಚಾಗಿ ರಂಜಿಸುತ್ತಿತ್ತು. ಸೀರೆಯಷ್ಟೇ ಮೃದುವಾದ ಗಿಳಿಹಸುರು

ಬಣ್ಣದ ರೇಷ್ಮೆಯ ಕುಪ್ಪಸವನ್ನು ತೊಟ್ಟಳು. ಬಿಳಿಹರಳುಗಳ ಸೊಗಸಾದ ಕೆತ್ತನೆಯ ಬೆಂಡೋಲೆಗಳನ್ನು ಕಿವಿಗಳಲ್ಲಿಟ್ಟು ಕೊಂಡಳು. ಕತ್ತಿನ ಸುತ್ತಲೂ ಹತ್ತಿರವಾಗಿರುವ ಆವರೆ ಒಂದಕ್ಕಿಂತ ಒಂದು ಹೆಚ್ಚು ಜೋಲುವ ಸಾಲ್ನೆಳೆಯ ತೋರ ಮುತ್ತಿನ ಹಾರವನ್ನು ಕಟ್ಟಿಕೊಂಡಳು. ಕೈಗಳಲ್ಲಿದ್ದ ಬಣ್ಣದ ಬಳೆಗಳ ಜೊತೆಗೆ ಚಿನ್ನದ ಬಳೆಗಳನ್ನೂ ಮುಂಗೈಗೆ ತೊಟ್ಟು ಕೊಂಡಳು. ಪಾದಗಳಿಗೆ ಒಪ್ಪವಾಗಿ ಬೆಳ್ಳಿಯ ನೂಪುರ ಗಳನ್ನು ಹಾಕಿಕೊಂಡಳು. ಇಷ್ಟು ಪೂರೈಸಿದ ಮೇಲೆ ತನ್ನ ಲ್ಲಿದ್ದ ಸುವಾಸನೆಯ ಕೊಬರಿಯೆಣ್ಣೆಯ ಶೀಸೆ, ಕನ್ನಡಿ, ಗಂಧದ ಬಾಚಣಿಗೆ, ಹಣೆಗಿಡುವ ಕಪ್ಪು ಮುಂತಾದ ಪರಿಕರ ಗಳನ್ನು ತೆಗೆದುಕೊಂಡು ಗೌರಮ್ಮನವರ ಬಳಿಗೆ ಹೋದಳು. ಗೌರಮ್ಮನವರು ಒಳಗೆ ಅಡಿಗೆ ಮಾಡುತ್ತಿದ್ದರು. ಶಾರದೆಯು ಪಡಸಾಲೆಯಲ್ಲಿ ರಂಗೋಲೆ ಹಾಕುತ್ತಿದ್ದಳು. ಲಲಿತೆಯನ್ನು ನೋಡಿದಾಕ್ಷಣ ಶಾರದೆಯು ಸಂತೋಷೋತ್ಸಾಹದಿಂದ ಕೂಗಿ ಬಿಡುತ್ತಿದ್ದಳು. ಅಷ್ಟರಲ್ಲಿ ಲಲಿತೆಯು ಅವಳನ್ನು ತುಟಿಬೆರಳ ಸನ್ನೆಯಿಂದ ತಡೆದಿರಿಸಿ ಹತ್ತಿರಕ್ಕೆ ಹೋಗಿ ಕಿವಿಯಲ್ಲಿ ಏನೋ ಉಸುರಿದಳು. ಶಾರದೆಯ ಮುಖ ನಾಚಿಕೆ ಸಂತೋಷಗಳಿಂದ ಕೆಂಪಾಯಿತು. ತನ್ನ ರಂಗೋಲೆ ಕಾರ್ಯವನ್ನು ನಿಲ್ಲಿಸಿ ಒಳಕ್ಕೆ ಬಹಳ ಎಚ್ಚರಿಕೆ ಸಾವಧಾನಗಳಿಂದ ಹೋಗಿ ಗೌರಮ್ಮನವ ರನ್ನುದ್ದೇಶಿಸಿ, "ಅಮ್ಮಾ, ಲಲಿತತ್ತೆಗೆ ತಲೆ ಬಾಚಬೇಕಂತೆ. ನಾನು ಒಲೆ ಹತ್ತಿರ ಇರುತ್ತೇನೆ." ಎಂದಳು. ಗೌರಮ್ಮನವ ರಿಗೆ ಕಾರಣವು ತಕ್ಷಣ ಹೊಳೆದು ಅವರ ವದನದಲ್ಲಿ ಮುಗು ಳ್ನಗೆ ಸೂಸಿತು. ಕೈ ತೊಳೆದುಕೊಂಡು ವಸ್ತ್ರದಲ್ಲಿ ಉಜ್ಜಿ ಒರಸಿಕೊಂಡು ಪಡಸಾಲೆಗೆ ಬಂದರು. ಚಾಪೆಯ ಮೇಲೆ

ಸಿಂಗಾರವೇ ನಾಚಿ ಕುಳಿತಂತಿದ್ದ ಲಲಿತೆಯನ್ನು ನೋಡಿ ಅವರ ಆನಂದಕ್ಕೆ ಮೇರೆಯಿಲ್ಲದಂತಾಯಿತು. “ಲಲಿತಾ, ಏನು ತಾಯಿ, ಇನ್ನೂ ತಲೆಗೂದಲು ಒದ್ದೆಯಾಗಿಯೇ ಇದೆ. ಆಗಲೇ ಬಾಚಬೇಕೆ? ಹೂ, ಇಲ್ಲದಿದ್ದರೆ ಕೂದಲು ನಯವಾಗಿ ಕಾಣುವುದಿಲ್ಲವಲ್ಲ! ಈ ಕಾಲದ ನಾಗರೀಕವನ್ನು ನಾವರಿಯೆವಮ್ಮಾ. ನೀವೆಲ್ಲಾ ಓದಿದ ಹೆಣ್ಣುಮಕ್ಕಳು.” ಎಂದು ವ್ಯಂಗ್ಯವಾಗಿ ಅಣಕವಾಡುತ್ತಲೇ ಲಲಿತೆಯ ತಲೆಗೆ ತೈಲವನ್ನು ಹಚ್ಚಿದರು. ನಂತರ ಗಂಧದ ಬಾಚಣಿಗೆಯಿಂದ ಅವಳ ತಲೆಯನ್ನು ಒಂದು ಅರ್ಧಗಂಟೆಯ ಕಾಲ ಬಹಳ ನಿಧಾನವಾಗಿ ನಯವಾಗಿ ಪ್ರೀತಿಮಮತೆಗಳ ಪೂರ್ಣಾಸಕ್ತಿಯಿಂದ ಬಾಚಿದರು. ಬಾಚುತ್ತಾ ಬಾಚುತ್ತಾ ಆ ವಿಧವೆ ಮಾತೆಯ ಮನದಲ್ಲಿ ಅವರ ತಾರುಣ್ಯದ ನೆನಪುಗಳು ಸುಳಿದು ಹೋಗುತ್ತಿದ್ದುವು :— ಅಂದು ತಮ್ಮ ತೌರೂರಾದ ಕಲ್ಯಾಣದುರ್ಗದ ಮೇಲೆ ಹರಿದುಬಂದ ಉದಯದ ಹೊಂಬೆಳಕು ಮನೆಯಂಗಳವನ್ನು ಮೀಯಿಸಿತ್ತು. ಹೊಳೆಯುವಂತೆ ಬೆಳಗಿದ ತಾಮ್ರದ ಬಿಂದಿಗೆಯಲ್ಲಿ ಬಾವಿಯಿಂದ ನೀರು ಸೇದಿಕೊಂಡು ಎಡಸೊಂಕದ ಮೇಲಿರಿಸಿಕೊಂಡು ಎಡತೋಳಿನಿಂದ ಅದನ್ನಪ್ಪಿಕೊಂಡು ಬಲದೋಳನ್ನು ಇಳಿಯಬಿಟ್ಟು, ಬಲಕ್ಕೆ ಸ್ವಲ್ಪ ಓರೆಬಾಗಿ ವೈಯಾರದಿಂದ ಮನೆಗೆ ನಡೆದು ಬರುತ್ತಿದ್ದಾರೆ ಹದಿನಾರರ ತಾರುಣ್ಯಪೂರ್ಣ ಸುಂದರಿಯಾಗಿದ್ದ ಗೌರಮ್ಮನವರು. ಅದೋ ಎದುರುಗಡೆಯಿಂದಲೇ ತಮ್ಮೂರಿಂದ ಗೆಳೆಯರೊಬ್ಬರೊಡನೆ ಬರುತ್ತಿದ್ದಾರೆ ತನ್ನ ಭಾವೀಪತಿಯಾಗುವ ಭಾವ ರತ್ನಯ್ಯ! ರತ್ನಯ್ಯನವರಿಗೆ ಆಗ ಇಪ್ಪತ್ತಾರರ ತಾರುಣ್ಯ. ಅರಸುಕುಮಾರನಂತಹ ಠೀವಿಯ

ನಡಗೆ! ತೇಜಃಪುಂಜವಾದ ಸುಂದರವದನದಲ್ಲಿ ತುಪ್ಪುಳು ಮೀಸೆ ಮೈದೋರುತ್ತಿವೆ! ಮುಲ್ಲು ರುಮಾಲು ವಿಶಾಲವಾದ ಹಣೆಯ ಒಂದು ಪಾರ್ಶ್ವವನ್ನೂ ಒಂದು ಕಿವಿಯ ಅರ್ಧ ವನ್ನೂ ಮುಚ್ಚಿದೆ. ಹಣೆಯಲ್ಲಿ ಒಂದೇ ಒಂದು ಕೆಂಪುನಾಮ. ನಯವಾದ ಕ್ಲೋಜು ಕಾಲರ್ ಕೋಟು ತೊಡೆಯವರೆಗೂ ಮುಚ್ಚಿದೆ. ವಿಶಾಲವಾದ ಉಬ್ಬಿದ ಎದೆಯು ವೀರವರೇಣ್ಯ ನನ್ನು ಜ್ಞಾಪಕಕ್ಕೆ ತರುತ್ತಿದೆ. ಬಿಳಿಮುಗಿಲಿನಂತೆ ಹಗುರ ವಾದ ಶುಭ್ರವಾದ ಮುಲ್ಲುಪಂಚೆಯುಟ್ಟಿದ್ದಾರೆ. ಬಲಗೈಲಿ ಪಂಚೆಯ ನೆರಿಗೆಯ ತುದಿಯನ್ನು ಹಿಡಿದಿದ್ದಾರೆ. ಹೊರಕ್ಕೆ ಗೋಚರಿಸುವ ಅವರ ಬಲಗಾಲಿನ ಕೆಳಭಾಗವು ಮೀನು ಖಂಡಗಳಿಂದ ತುಂಬಿ ಭವ್ಯವಾದ ವಿಗ್ರಹದ ಕಾಲಿನಂತೆ ಘನಸುಂದರವಾಗಿ ಕೆಂಪಗೆ ಹೊಳೆಯುತ್ತಿದೆ. ಪಾದಗಳಲ್ಲಿ ಕಾಲು ಅಡಿ ಎತ್ತರದ ಮಿರ್‌ಮಿರ್‌ಗುಟ್ಟುವ ಮೆಟ್ಟುಗಳು! ಗೌರಮ್ಮನವರಿಗೂ ರತ್ನಯ್ಯನವರಿಗೂ ಗೊತ್ತಾಗಿದ್ದ ಮದುವೆ ಇನ್ನೊಂದು ತಿಂಗಳು ಮಾತ್ರವಿತ್ತು. ನೀರು ತರುತ್ತಿದ್ದ ಗೌರಮ್ಮನವರನ್ನು ನೋಡಿ ರತ್ನಯ್ಯನವರ ತಾಂಬೂಲ ತುಂಬಿದ ಕೆಂಪು ತುಟಿಗಳಲ್ಲಿ ಮುಗುಳ್ನಗೆಯು ತುಳುಕಿ ಬಂತು. ಗೌರಮ್ಮನವರು ಅವನ್ನು ನೋಡಿದಾಕ್ಷಣವೇ ನಾಚಿಗೆಯಿಂದ ಕಂಪಿತರಾಗಿ ತಲೆಬಾಗಿ ಮನೆಯೊಳಕ್ಕೆ ರಭಸ ವಾಗಿ ಹೋಗಿಬಿಟ್ಟರು! ಬಿಂದಿಗೆಯ ನೀರು ಸ್ವಲ್ಪ ತುಳುಕಿತು. ರತ್ನಯ್ಯನವರು ಕಲ್ಯಾಣದುರ್ಗದಲ್ಲಿ ಎರಡು ಒಳ್ಳೆಯ ಹೋರಿಗಳನ್ನು ಕೊಳ್ಳಲು ಬಂದಿದ್ದರು. ಆ ಹೊತ್ತು ಮಾವನ ಮನೆಯಲ್ಲಿ ನಿಂತ ರತ್ನಯ್ಯನವರನ್ನು ಗೌರಮ್ಮನವರು ಹಗ ಲೆಲ್ಲಾ ಒಳಬಾಗಿಲಲ್ಲಿ ಮರೆಯಾಗಿ ನಿಂತು ಇಣಿಕಿ

ನೋಡುತ್ತಾ ಆನಂದದ ಕನಸುಗಳಲ್ಲಿ ಮೈಮರೆತು ಕಾಲ ವನ್ನು ತಳ್ಳಿದರು. ತಮ್ಮ ತಂದೆ, ಅಣ್ಣಂದಿರು, ತಮ್ಮಂದಿರು ಮುಂತಾದವರ ಜೊತೆಯಲ್ಲಿ ರತ್ನಯ್ಯನವರು ಊಟಕ್ಕೆ ಕುಳಿತಾಗ ತನ್ನ ತಾಯಿಯ ಬಲವಂತದಿಂದ ಗೌರಮ್ಮನವರೇ ಅವರಿಗೆಲ್ಲಾ ಊಟಕ್ಕೆ ಬಡಿಸಬೇಕಾಗಿ ಬಂತು. ಆಗ ರತ್ನಯ್ಯ ನವರ ಎಲೆಯು ಸಮೀಪಿಸುತ್ತಿರುವಂತೆಯೇ ಅವರ ಕಾಲು ಗಳೇ ಸ್ವಾಧೀನ ತಪ್ಪಿದಂತಾಗುತ್ತಿತ್ತು. ಕೈಗಳು ಬಡಿಸು ವಾಗ ನಡುಗಿ ಅಸ್ತವ್ಯಸ್ತವಾಗುತ್ತಿದ್ದುವು. ಒಮ್ಮೆ ರತ್ನಯ್ಯ ನವರ ಮುಂದೆ ಬಾಗಿದಾಗಲೇ ಅವರ ದೀರ್ಘವಾದ ಜಡೆಯು ನಾಗರಹಾವಿನಂತೆ ಭುಜದ ಮೇಲಿನಿಂದ ಮುಂಭಾಗಕ್ಕೆ ಇಳಿಯಬೇಕಬೇಕೆ? ಅಬ್ಬ! ಊಟವನ್ನು ಬಡಿಸುವುದರೊಳ ಗಾಗಿ ಗೌರಮ್ಮನವರಿಗೆ ಒಂದು ಅಗ್ನಿಹರ್ಷಗಳ ಸ್ನಾನಮಾಡಿ ದಂತಾಯಿತು! ಅವರ ಕೆಂಪಾದ ಕಪೋಲದಲ್ಲಿ ಬೆವರು ಸುರಿಯುತ್ತಿತ್ತು! ಊಟಕ್ಕೆ ಬಡಿಸುವಾಗ ನಾಚಿಗೆಯ ಜೊತೆಗೆ ಅವರ ಅಣ್ಣತಮ್ಮಂದಿರ ಅಣಕವಾಡಗಳ ಹಿಂಸೆ ಬೇರೆ! ವೃದ್ಧರಾದ ಅವರ ತಂದೆ ಮೌನವಾಗಿಯೇ ಸುಖಿಸುತ್ತಿದ್ದರು!

ಅಂದಿನ ಆ ಚಿತ್ರವು ಇಂದು ಗೌರಮ್ಮನವರ ಮನದಲ್ಲಿ ಚಿತ್ರೀಭವಿಸಿತು. ಈ ಚಿತ್ರದ ಜೊತೆಗೆ ಅವರ ಮದುವೆ, ಪ್ರಸ್ತ, ಹಬ್ಬದೂಟ, ಪ್ರೇಮದಾಟಗಳ ನೂರಾರು ಚಿತ್ರ ಗಳೂ ಮರುಕೊಳಿಸಿ ಬಂದು ಗೌರಮ್ಮನವರ ಕಣ್ಣ ಮುಂದೆ ನಿಂತುವು. ಆದರೆ..........ಆದರೆ..........ಆ ದೇವಸುಂದರ ಮೂರ್ತಿಯೊಡನೆ ಪದವೀಧರನಾಗಲಿರುವ ಪ್ರಾಯದ ಮಗ ನನ್ನು ನೋಡಿ ಪರಸ್ಪರರು ನಲಿಯುವ ಭಾಗ್ಯ ತಮಗಿಲ್ಲದೇ ಹೋಯಿತಲ್ಲಾ-ಎಂಬ ಯೋಚನೆ ಸುಸುಳಿ ಬಂದು ಸುಳಿ

ದೊಡನೆಯೇ ಗೌರಮ್ಮನವರ ಕಣ್ಣು ತುಂಬಾ ನೀರು ತುಂಬಿ ಕೊಂಡಿತು. ಗಂಟಲು ಕಟ್ಟಿಕೊಂಡು ಬಂದಿತು. ಅಷ್ಟು ಹೊತ್ತಿಗಾಗಲೇ ಅವರು ಲಲಿತೆಯ ತಲೆಯನ್ನು ಬಾಚಿ ಹೆರಳನ್ನು ಹಾಕಿ ಅದರ ತುದಿಗೆ ಬಣ್ಣದ ರಿಬ್ಬನ್ನುಗಳನ್ನು ಕಟ್ಟಿ ಪೂರೈಸಿದ್ದರು. ಅವರ ಕಣ್ಣೀರು ಲಲಿತೆಯ ಬೆನ್ನ ಮೇಲೆ ನಾಲ್ಕಾರು ಹನಿಗಳು ಬಿದ್ದು ಕುಪ್ಪಸದಲ್ಲಿ ಇಂಗಿಹೋಗಿ ಅವಳ ಬೆನ್ನನ್ನು ಬೆಚ್ಚಗೆ ಮಾಡಿದುವು. ಲಲಿತೆಗೆ ಏನೋ ಭಾವಸ್ಫುರಣೆಯಾದಂತಾಗಿ ಹಿಂತಿರುಗಿ ನೋಡಿದಳು. ಗೌರಮ್ಮನವರ ಶೋಕವದನವನ್ನೂ ಅಶ್ರುಪೂರಿತವಾದ ನೇತ್ರಗಳನ್ನೂ ಕಂಡಳು. ತಕ್ಷಣ ಅವಳಿಗೆ ದುಃಖವುಕ್ಕಿ ಬಂದು "ಏಕಮ್ಮಾ ಅಳೋದು? ನಾನು ನಿನ್ನನ್ನು ಬಿಟ್ಟು ಸಾಯುವವರೆಗೂ ಎಲ್ಲಿಯೂ ಹೋಗುವುದಿಲ್ಲ. ಸುಮ್ಮನಿರಮ್ಮಾ." ಎಂದು ಗೌರಮ್ಮನವರ ಕಣ್ಣೀರನ್ನೊರಸಿ ಎಳೆಯ ಮಗುವಿನಂತೆ ಪ್ರೀತಿಯಿಂದ ಅವರ ಎದೆಯಲ್ಲಿ ತನ್ನ ಮುಖವನ್ನಡಗಿಸಿದಳು. ಗೌರಮ್ಮನವರಿಗೆ ನಗು ಅಳುಗಳೆರಡೂ ಬಂದುವು. ಅದರಿಂದ ತಮ್ಮ ದುಃಖವನ್ನು ಸಂಯಮಿಸಿ ಕೊಂಡು ಅಕ್ಕರೆಯುಕ್ಕುವಂತೆ ಲಲಿತೆಯ ಎಣ್ಣೆನೀರೆರೆದು ಕೊಂಡ ಮುದ್ದುಮುಖವನ್ನು ತಮ್ಮ ಅಂಗೈನಿಂದ ನುಣ್ಣನೆ ಒರಸಿ ಅವಳ ಹಣೆಗೆ ಕಪ್ಪು ತಿಲಕವನ್ನಿಟ್ಟರು. ನಾಚಿಗೆ ಹರ್ಷಗಳಲ್ಲಿ ಪರವಶಳಾದ ಲಲಿತೆಯು ಮತ್ತೆ ಚೇತರಿಸಿ ಕೊಂಡು ನಾಚಿಗೆಯ ನೋಟವನ್ನು ಬೀರುತ್ತಾ ಮೆಲ್ಲನೆ, "ಅಮ್ಮಾ, ಬಸ್ಸು ಬರೋ ರಸ್ತೆಗೆ ಸವಾರಿಬಂಡಿ ಹೋಗಿದೆಯೇ?" ಎಂದು ಕೇಳಿದಳು. ಗೌರಮ್ಮನವರಿಗೆ ಅವಳ ಪ್ರಶ್ನೆಯ ಅರ್ಥವು ವೇದ್ಯವಾಗಿ ನಕ್ಕು, "ಅಯ್ಯೋ ನನ್ನಮ್ಮ

ಚಂದ್ರು ಬರೋದು ಇನ್ನೂ ಊಟದ ಹೊತ್ತಾಗುತ್ತೆ. ಅಷ್ಟರೊಳಗೆ ತೋಟಕ್ಕೆ ಹೋಗಿ ಹೂವು ಮುಡಿದುಕೊಂಡು ಬನ್ನಿ ...........ಶಾರದಾ, ನೀನೂ ಬಾರೆ, ತಲೆ ಬಾಚುತ್ತೇನೆ. ಲಲಿತಕ್ಕನ ಜೊತೇಲಿ ಹೋಗಿ ಬಾ. ನಿಮ್ಮ ತಂದೆತಾಯಿಯರು ಅಲ್ಲಿಯೇ ಇದ್ದಾರೆ" ಎಂದರು. ಲಲಿತೆಯು "ಶಾರದಂಗೆ ನಾನೇ ತಲೆ ಬಾಚುತ್ತೇನೆ. ನೀನು ಹೋಗಮ್ಮಾ." ಎಂದು ಒತ್ತಾಯವಾಗಿ ಗೌರಮ್ಮನವರನ್ನು ಕಳಿಸಿಕೊಟ್ಟು ಶಾರದೆಯನ್ನು ಹತ್ತಿರ ಕುಳ್ಳಿರಿಸಿಕೊಂಡಳು. ಶಾರದೆಯ ತಲೆಯನ್ನು ಬಾಚುತ್ತಾ ಬಾಚುತ್ತಾ ಲಲಿತೆಯು ಅದೆಷ್ಟು ಸಾರಿ ಶಾರದೆಯ ಕೆನ್ನೆಗಳಿಗೆ ಮುತ್ತುಕೊಟ್ಟಳೋ ಏನೋ ಶಾರದೆಯು ಕಿಲಿಕಿಲಿ ನಗುತ್ತಾ ಓರೆಗಣ್ಣಿಂದ ಲಲಿತೆಯನ್ನು ಅಣಕಿಸುತ್ತಾ "ತಡೀ. ತಡೀ. ಎಲ್ಲಾ ನನಗೇ ಕೊಡುತ್ತೀಯಾ? ಚಂದ್ರಣ್ಣಯ್ಯ ಬರಲಿ ಹೇಳುತ್ತೇನೆ." ಎಂದು ಪಿಸುದನಿಯಲ್ಲಿ ಹಾಸ್ಯಮಾಡುತ್ತಿದ್ದಳು. ಅವಳ ಮಾತುಗಳಿಂದ ಲಲಿತೆಯು ಮುಸಿಮುಸಿನಗು ತಾಳಿ ಮತ್ತೆ ಮತ್ತೆ ಶಾರದೆಯನ್ನು ಮುದ್ದಾಡಿ ಆತ್ಮಾನಂದಪರವಶಳಾಗುತ್ತಿದ್ದಳು.

ಜೂನಿಯರ್ ಬಿ.ಎ. ಪರೀಕ್ಷೆಯಲ್ಲಿ ಚಂದ್ರಣ್ಣನು ಪ್ರಶ್ನೆಪತ್ರಿಕೆಗಳಿಗೆ ಉತ್ತರಗಳನ್ನು ಚೆನ್ನಾಗಿ ಬರೆದಿದ್ದನು. ಅವನ ಗುರುಮಹಾಶಯನ ಆಶಯದಂತೆ ಅವನು ಸಾಹಿತ್ಯಪಾಠ, ರಾಜ್ಯಶಾಸ್ತ್ರ ಮತ್ತು ವೇದಾಂತಪಾಠಗಳನ್ನು ವ್ಯಾಸಂಗ ಮಾಡುತ್ತಿದ್ದನು. ವೇದಾಂತಶಾಖೆಯಲ್ಲಿ ಮನೋವಿಜ್ಞಾನವೂ ಒಂದು ಪಾಠವಾಗಿತ್ತು. ರಾಜ್ಯಶಾಸ್ತ್ರದಲ್ಲಿಯೇ ಚಂದ್ರಣ್ಣ ಸ್ವಲ್ಪ ಹಿಂದು. ಉಳಿದೆರಡರಲ್ಲಿ ಬಹು ಮುಂದು. ರಾಜ್ಯಶಾಸ್ತ್ರ ಪ್ರತ್ಯಕ್ಷ ಜೀವನದಲ್ಲಿ ಹೆಚ್ಚು ಅರ್ಥವಾಗುತ್ತದೆ. ಮುಂದೆ

ದೇಶದ ರಾಜಕೀಯ ಜೀವನಕ್ಕಿಳಿದಾಗ ಅದು ತಾನಾಗಿಯೇ ಚೆನ್ನಾಗಿ ಅನುಭವವೇದ್ಯವಾಗುತ್ತದೆ. ಈಗ ಅದರ ಸೂತ್ರ ಜ್ಞಾನವು ಬುದ್ಧಿಗೆ ಮಾತ್ರ ಗೋಚರವಾಗುತ್ತದೆ. ಇದಕ್ಕೆ ಉದಾಹರಣೆ ಗಾಂಧೀಜಿಯವರ ಜೀವನವೇ ಅದ್ವಿತೀಯವಾಗಿದೆ. ಅವರು ಯಾವ ಬಿ.ಎ. ತರಗತಿಯನ್ನೂ ಓದಿಲ್ಲ. ಮ್ಯಾಟ್ರಿಕ್ ಆದ ತಕ್ಷಣವೇ ಬಾರ್-ಅಟ್-ಲಾ ಓದಿ ಬಂದು ಮೊದಮೊದಲು ತಮ್ಮ ವಕೀಲಿ ವೃತ್ತಿಯಲ್ಲಿ ಅಪಜಯ ಹೊಂದಿದರು. ಆದರೆ ದಕ್ಷಿಣ ಆಫ್ರಿಕದಲ್ಲಿ ಒಂದು ಸಾಮಾಜಿಕ ಹೋರಾಟದಲ್ಲಿ ಅವರ ಜಿವನವು ಸಿಕ್ಕಿಕೊಂಡ ಮೇಲೆ ರಾಜಕೀಯವು ಅವರಿಗೆ ಜೀವನದ ಕನ್ನಡಿಯಾಯಿತು.- ಎಂದು ಮುಂತಾಗಿ ಚಂದ್ರಣ್ಣನ ಪ್ರಿಯ ಗುರುಗಳು ಅವನಿಗೆ ಪ್ರೋತ್ಸಾಹದ ಮಾತಾಡುತ್ತಿದ್ದರು.

ಚಂದ್ರಣ್ಣನು ಮನೆಯಲ್ಲಿ ಪ್ರಿಯ ಗುರುವರ್ಯನ ಆತ್ಮ ಶಿಷ್ಯನಾಗಿದ್ದರೆ ಕಾಲೇಜಿನಲ್ಲಿ ಪ್ರೊಫೆಸರುಗಳಿಗೂ ಉಪನ್ಯಾಸಕರುಗಳಿಗೂ ಮೆಚ್ಚುಗೆಯ ವಿದ್ಯಾರ್ಥಿಯಾಗಿದ್ದನು. ವಿದ್ಯಾರ್ಥಿಗಳನೇಕರು ಅವನೊಡನೆ ಓಡಾಡುವುದು ಮತ್ತು ಅವನೊಂದಿಗೆ ಮಾತಾಡುವುದೆಂದರೆ ತಮಗೊಂದು ಗೌರವವೆಂದು ತಿಳಿದಿದ್ದರು. ಏಕೆಂದರೆ ಚಂದ್ರಣ್ಣನು ಪಾಠಗಳಲ್ಲಿ ಮುಂದಾದಂತೆಯೇ ನಡತೆಯಲ್ಲಿ ಆ ಕಾಲೇಜಿಗೇ ಭೂಷಣವಾಗಿದ್ದನು. ವಾಲಿಬಾಲ್ ಒಂದು ಆಟವನ್ನು ಮಾತ್ರ ಅವನು ಬಹಳವಾಗಿ ಪ್ರೀತಿಸುತ್ತಿದ್ದನು. ಅವನ ಸೌಂದರ್ಯ ಅದರ ಜೊತೆಗೆ ಅವನ ಧ್ಯಾನಗಾಂಭೀರ್ಯ—ಇವೆರಡೇ ಅವನಿಗೆ ಅಷ್ಟು ದೊಡ್ಡ ಗೌರವವನ್ನು ಗಳಿಸಿಕೊಟ್ಟದ್ದುವೆಂದರೆ ಅತಿಶಯೋಕ್ತಿಯಲ್ಲ. ಸುಂದರವಾದ ತರುಣರು ಕಾಲೇಜುಗಳಲ್ಲಿ ತರುಣಿಯರಿಗಿಂತ

ಚಂಚಲರಾಗಿ ಕೇವಲ ಅಲಂಕಾರ ಹಾವಭಾವವಿಲಾಸಪ್ರಿಯ ರಾಗಿ ಅಬಲೆಯರಿಗಿಂತ ಅಬಲಚಾರಿತ್ರರಾಗಿ ಮೆರೆದು ಕೆಳ ಮಟ್ಟಕ್ಕಿಳಿಯುವುದು ನಾವೆಲ್ಲಾ ನೋಡುತ್ತಿರುವ ಸಾಮಾನ್ಯ ವಿಷಯ. ಆದರೆ ದೈವೀದತ್ತವಾದ ಸೌಂದರ್ಯದೊಡನೆ ದೃಢ ವಾದ ಚಾರಿತ್ರಸಂಯಮಗಳ ಅಧಿದೇವರಾಗಿ ವೀರಪೌರುಷ ಗಾಂಭೀರ್ಯಗಳ ಆಗರವಾಗಿ ಔಚಿತ್ಯವನ್ನರಿತವರಾಗಿ ಆದರ್ಶ ಮಾನವರಾಗುವ ಕಾಲೇಜು ತರುಣರು ಅಪರೂಪವೆಂಬುದು ಬಹುಜನರ ತಿಳಿವಿಗೆ ಗೋಚರಿಸಿರುವ ಸತ್ಯ. ಚಂದ್ರಣ್ಣನು ಈ ಎರಡನೆಯ ಜಾತಿಗೆ ಸೇರಿದವನಾಗಿದ್ದುದರಿಂದಲೇ ಅವನ ಉಪಾಧ್ಯಾಯವರ್ಗವೂ ಒಮ್ಮೊಮ್ಮೆ ಅವನನ್ನು ತಮ್ಮ ತಮ್ಮ ಆಂತರ್ಯವಾದ ಸಭೆಗಳಿಗೆ ಕರೆಸಿಕೊಂಡು ಸಮಾನ ಗೌರವ ವನ್ನು ಕೊಡುತ್ತಿದ್ದರು. ಅವನು ಮಾತ್ರ ತನ್ನಲ್ಲಿ ಒಳ್ಳೆಯದೇ ನಿದ್ದರೂ ತನ್ನ ಆಂತರ್ಯಗುರುವರ್ಯನ ಆಶೀರ್ವಾದದ ಫಲಗ ಳೆಂದು ನುಡಿದು ಕಾಲೇಜು ಉಪಾಧ್ಯಾಯರ ಮುಂದೆ ತನ್ನ ಹೈಸ್ಕೂಲು ಉಪಾಧ್ಯಾಯರ ದಿವ್ಯಗುಣಗಳನ್ನು ಪ್ರಶಂಸಿಸಿ ತನ್ನ ವಿನಯವನ್ನು ಪ್ರಕಟಿಸುತ್ತಿದ್ದನು.

ಪರೀಕ್ಷೆ ಪೂರೈಸಿತು. ಚಂದ್ರಣ್ಣನು ಊರಿಗೆ ಹೊರಡಲು ಸಿದ್ಧವಾಗಿ ತನ್ನ ಗುರುಮಾತಾಪಿತೃಗಳ ಚರಣಾರವಿಂದಗಳಲ್ಲಿ ಹಣೆಯಿಟ್ಟವನಾಗಿ ಇಬ್ಬರ ಪ್ರೀತಿಯ ಆಶೀರ್ವಾದಗಳನ್ನು ಪಡೆದದ್ದಾಯಿತು. ಅವನು ಬಸ್ ಸ್ಟ್ಯಾಂಡಿಗೆ ಬಂದಾಗ ದೂರದಲ್ಲಿ ನೀಲವಾಗಿ ಮೆರೆಯುತ್ತಿದ್ದ ಪೂರ್ವಾದ್ರಿಗಳ ಮೇಲೆ ಹೊನ್ನಿನುದಯವು ಸೂರೆಹೋಗಿತ್ತು! ಅತಿ ನಿಬಿಡವಲ್ಲದ ವನಶ್ರೇಣಿಗಳಲ್ಲಿ ವಸಂತರಾಜನ ಆವಿರ್ಭೂತಿಯು ನವೋತ್ಸಾಹದಾಯಕವಾಗಿತ್ತು. ಹೊನ್ನಿನ

ಜೆಳಕು ಭೂಮಿಯನ್ನು ಚಿನ್ನವಾಗಿಸಿತ್ತು. ಬಸ್ಸಿನಲ್ಲಿ ಚಂದ್ರಣ್ಣನು ಕುಳಿತದ್ದಾಯಿತು. ಬಸ್ಸು ಹೊರಡಲು ಕಾಲುಗಂಟೆ ತಡವಾದದ್ದಕ್ಕೇನೇ ಪ್ರಯಾಣಿಕರು ಏನೋ ತಮ್ಮ ತಮ್ಮ ಮನೆಮಾರುಗಳೆಲ್ಲಾ ಮುಳುಗಿಹೋದುವೋ ಎಂಬಂತೆ ಕಂಡಕ್ಟರ್ ಡ್ರೈವರುಗಳನ್ನು ನಿಂದಿಸುತ್ತಾ ಗೊಣಗುಟ್ಟುತ್ತಾ ಗದ್ದಲಮಾಡುತ್ತಿದ್ದರು. ಚಂದ್ರಣ್ಣನಾದರೋ ತಾನೂ ಊರಿಗೆ ಹೋಗಲು ಆತುರಮನಸ್ಕನಾಗಿದ್ದರೂ ಸಹ ಬಸ್ಸು ಎಷ್ಟು ಹೊತ್ತು ತಡವಾದರೆ ಅಷ್ಟು ಹಿತಸಮಾಧಾನಚಿತ್ತನಾಗಿ ಒಮ್ಮೆ ನಗರದ ಸೌಧ ಶ್ರೇಣಿಗಳನ್ನೂ, ಒಮ್ಮೆ ಬಡಗುಡಿಸಲುಗಳನ್ನೂ, ಒಮ್ಮೆ ಜನಸಮೂಹವನ್ನೂ ಮತ್ತು ಅವರ ನಡೆನುಡಿಗಳನ್ನೂ ಬಹು ಕುತೂಹಲಚಿತ್ತನಾಗಿ ನೋಡುತ್ತಾ ಮನಗೂಡಿ ಅನು ಜೀವಿಸುತ್ತಿದ್ದನು. ಆದರೆ ಅವನ ಚಿತ್ತವು ಮತ್ತೆ ಮತ್ತೆ ಉದಯರವಿಯು ಮತ್ತು ವನಗಳಿಂದ ಶೋಭಿಸುವ ಭೂದೇವಿಯ ದೈವೀಸೌಂದರ್ಯದ ಕಡೆ ತಿರುಗಿ ಕ್ಷಣಕಾಲ ಅಲ್ಲಿಯೇ ಸೆರೆಯಾಗುತ್ತಿತ್ತು. ಅಂತೂ ಬಸ್ಸು ಹೊರಟಿತು. ಬಸ್ಸನ್ನು ತುಂಬಿದ್ದ ಪ್ರಯಾಣಿಕರು ಏನನ್ನೋ ಸಾಧಿಸಿದವರಂತೆ ವಿರಸದ ಗದ್ದಲವನ್ನು ಕೈಬಿಟ್ಟು ಸರಸವಿನೋದ ಸಂಕಥನಗಳಲ್ಲಿ ಮಗ್ನರಾದರು.

ಬಸ್ಸು ಜೀಗುಟ್ಟುತ್ತಾ ಆ ಬಯಲುನಾಡನ್ನು ಇಬ್ಭಾಗವಾಗಿ ಸೀಳಿಕೊಂಡು ತನ್ನ ಪುಚ್ಛದ ಕಡೆ ಧೂಳೆಬ್ಬಿಸುತ್ತಾ ಹೋಗುತ್ತಿದ್ದರೆ ಇಕ್ಕೆಲಗಳಲ್ಲಿ ವಿರಳವಾದ ವೃಕ್ಷಸಂಕುಲಗಳ ಅಕ್ಕಡಿಯ ಹಸುರು ವರ್ತುಳವಾಗಿ ತಿರುಗಿದಂತೆ ಭಾಸವಾಗಿ ಕಣ್ಮುಟುಕುವನಿತರಲ್ಲಿ ಹಿಂದಕ್ಕೆ ಓಡುತ್ತಿತ್ತು! ಅಲ್ಲಲ್ಲಿ

ಎದುರಾದ ಹೊಂಗೆಯ ವನಗಳಲ್ಲಿ ಓಕುಳಿಬಣ್ಣದ ಚಿಗುರು ನಳನಳಿಸುತ್ತಿದ್ದರೆ ಮರಗಳ ಬುಡಗಳಲ್ಲಿ ಉದುರಿದ ಹೂವಿನ ರಾಶಿಯು ರಂಗೋಲೆಗಳು ಕಂಗೊಳಿಸುತ್ತಿದ್ದುವು! ಮಾವಿನ ತೋಪುಗಳಲ್ಲಿ ಕೆಂಪಾದ ಎಳೆದಳಿರು, ಬಿಳಿದಾದ ಹೂಗೊಂಚಲು, ಜೊತೆಜೊತೆಗೆ ಮಿಡಿಗಾಯಿಗಳು ನೋಡುವ ಕಣ್ಣುಗಳಲ್ಲಿ ನಂದನವನ್ನು ಕೆತ್ತುತ್ತಿದ್ದುವು! ಮುತ್ತುಗದ ಹೂವುಗಳ ಕೆಂಡಗೆಂಪು ಪ್ರೇಮಿಗಳೆದೆಯಲ್ಲಿ ಜ್ವಾಲೆಗಳನ್ನೆಬ್ಬಿಸುತ್ತಿತ್ತು. ಬಯಲುಸೀಮೆಯಾದರೇನು? ಅದು ಚೈತ್ರಮಾಸವಲ್ಲವೆ? ಹಾಗೆ ಸುಳಿದು ಮಿಂಚಿ ಕಣ್ ರಮಿಸಿ ಕಣ್ಮರೆಯಾಗುತ್ತಿದ್ದ ಸೃಷ್ಟಿಸೌಂದರ್ಯವನ್ನು ನೋಡುತ್ತಿದ್ದ ಚಂದ್ರಣ್ಣನ ಹೃದಯವು ಬಸ್ಸಿನ ಝೇಂಕಾರದ ಮೇಳಕ್ಕೆ ಆನಂದದ ತಾಳವನ್ನು ಹಾಕುತ್ತಾ ನರ್ತಿಸಿ ನಲಿಯುತ್ತಿತ್ತು. ಅನಿರೀಕ್ಷಿತವಾಗಿ ಅವನ ಸ್ಮೃತಿಯಲ್ಲಿ ಟಿ. ನಾಷ್ ಕವಿಯ—

Spring, the sweet spring, is the year's pleasant king;
Then blooms each thing, then maids dance in a ring,
Cold doth not sting, the pretty birds do sing,
Cuckoo, jug-jug, pu-we, to-witta-woo!*

---

* ವಸಂತ ಬಂದ, ಋತುಗಳ ರಾಜ ತಾ ಬಂದ,
ಚಿಗುರನು ತಂದ, ಹೆಣ್ಗಳ ಕುಣಿಸುತ ನಿಂದ,
ಚಳಿಯನು ಕೊಂದ, ಹಕ್ಕಿಗಳುಲಿಗಳೆ ಚಂದ,
ಕೂವೂ, ಜಗ್ ಜಗ್, ಪುವ್ವೀ, ಟೂ ವಿಟ್ಟವೂ!
—'ಶ್ರೀ'ಯವರ ಇಂಗ್ಲಿಷ್ ಗೀತಗಳಿಂದ

ಎಂಬ ಹಾಡು ಮೂಡಿ ಬಂದು ಜನಸಂದಣಿಯ ಭೀತಿಯಿಂದ ಒಳಗೇ ಹಾಡಿಕೊಳ್ಳುತ್ತಿತ್ತು !

ಅಷ್ಟರಲ್ಲಿ ಕಂಡಕ್ಟರನು ಪೀಪಿ ಊದಲು ಬಸ್ಸು ನಿಂತಿತು. ಚಂದ್ರಣ್ಣನು ಬಸ್ಸು ಇಳಿಯುತ್ತಿದ್ದ ಹಾಗೆಯೇ ರಸ್ತೆಯ ಪಕ್ಕದಲ್ಲಿ ತಮ್ಮ ಮನೆಯ ಸವಾರಿಬಂಡಿಯನ್ನೂ ಹರಿಜನರ ಮಾರನನ್ನೂ ನೋಡಿ ಹರ್ಷಿತನಾದನು. ಕಂಡಕ್ಟರನು ಬಸ್ಸಿನ ಮೇಲಿಂದ ಇಳಿಸಿಕೊಟ್ಟ ಹಾಸಿಗೆ ಟ್ರಂಕುಗಳನ್ನು ಮಾರನು ಬಂಡಿಯಲ್ಲಿ ಅಳವಡಿಸಿದನು. ಬಸ್ಸು ತನ್ನೊಡಲಿನಿಂದ ಕೆಳಗಿಳಿದ ಪ್ರಯಾಣಿಕರಿಗಾಗಿ ಸ್ವಲ್ಪವೂ ವಿರಹಯಾತನೆಯನ್ನಾಗಲೀ ಸಹಾನುಭೂತಿಯನ್ನಾಗಲೀ ತೋರಿಸದೆ ಮುಕ್ತಾತ್ಮನಂತೆ ಫೇರಿ ಹೊರಟಿತು ! ಚಂದ್ರಣ್ಣನು ಬಂಡಿಹತ್ತಿ ತನ್ನ ಹಾಸಿಗೆಯನ್ನು ದಿಂಬಾಗಿ ಮಾಡಿ ಒರಗಿ ಕುಳಿತನು. ಗೆಜ್ಜೆ ಕುಚ್ಚುಗಳನ್ನು ಕಟ್ಟಿದ್ದ ನೀಲವರ್ಣದ ಹೋರಿಗಳು ಮಾರನ ಹಸ್ತಗಳ ಸ್ಪರ್ಶ ಮಾತ್ರದಿಂದಲೇ ನವೀನೋತ್ಸಾಹಭರಿತವಾಗಿ ವೇಗವಾಗಿ ಹೊರಟವು.

ಬಂಡಿಯಲ್ಲಿ ಕುಳಿತ ಚಂದ್ರಣ್ಣನಿಗೆ ಬಸ್ಸಿನಲ್ಲಿ ಕಾಣುತ್ತಿದ್ದ ಪ್ರಕೃತಿ ಸೌಂದರ್ಯದ ನೋಟಗಳೇ ಈಗ ಸಾವಧಾನವಾಗಿ ನಿಂತಲ್ಲಿಯೇ ಹೆಚ್ಚು ಹೊತ್ತು ನಿಂತು ಕಂಗೊಳಿಸುತ್ತಿದ್ದುವು. ಬಸ್ಸಿನಲ್ಲಿ ಇತರ ಜನರ ಭಯದಿಂದ ಅವನ ಪ್ರತಿಭೆಯಲ್ಲಿ ಅವ್ಯಕ್ತನಾದಗೈಯುತ್ತಿದ್ದ ಟಿ. ನಾಷ್ ಕವಿಯ ಮೇಲಿನ ಹಾಡು ಈಗ ವ್ಯಕ್ತರೂಪವನ್ನು ತಾಳಿ ಅವನ ಇಂಪಾದ ಸಣ್ಣ ದನಿಯಲ್ಲಿ ಹೊರಹೊಮ್ಮಿತು. ನಿಜವಾಗಿಯೂ ಈಗ ಹಕ್ಕಿಗಳ ಇಂಪುಲಿಗಳು ಹತ್ತಿರದಿಂದಲೂ ದೂರ

ದಿಂದಲೂ ಕೇಳಿಬರುತ್ತಿದ್ದುವು! ಮೇಲಿನ ಹಾಡು ಅನೇಕ ಸಾರಿ ಅವನ ಇನಿದನಿಯಲ್ಲಿ ಪುನರಾವರ್ತನೆಗೊಂಡ ಮೇಲೆ ಅವನಿಗೆ ಸಹಜವಾಗಿಯೇ ತನ್ನೂರಿನ ನೆನಪುಂಟಾಯಿತು. ತಾಯಿ, ಚಿಕ್ಕಪ್ಪ, ಚಿಕ್ಕಮ್ಮ, ತಂಗಿ ಶಾರದ, ಬಾಲ್ಯ ವಿದ್ಯಾಗುರು ಶ್ಯಾಮಯ್ಯನವರು, ಬಾವಿ, ತೋಟ, ಹೊಲ, ಗದ್ದೆ,- -ಎಲ್ಲವೂ ಚಲನ ಚಿತ್ರಗಳಂತೆ ಮಿಂಚುತ್ತಿದ್ದಂತೆಯೇ ಅವನ ಹೃದಯದ ಜ್ಯೋತಿರ್ಮೂರ್ತಿಯಾದ ಲಲಿತೆಯ ನಗುಮೊಗವು ಮೂಡಿ ಅವನ ಸ್ಮರಣೆಯ ಸ್ವರ್ಗದಲ್ಲಿ ಸ್ಥಾಯಿಯಾಗಿ ನಿಂತಿತು! ಇದ್ದಕ್ಕಿದ್ದಂತೆಯೇ ಅವನ ಸುಮಧುರವಾದ ಕಂಠದಿಂದ ಮೆಲ್ಲನೆ ಬಹುಮೆಲ್ಲನೆ ವೀಣಾನಾದಸದೃಶವಾಗಿ ಸಿ. ಮಾರ್ಲೋ ಕವಿಯ-

Come live with me and be my love,
And we will all the pleasures prove
That hills and valleys, dale and field,
And all the craggy mountains yield.

There will we sit upon the rocks
And see the shepherds feed their flocks,
By shallow rivers, to whose falls
Melodious birds sing madrigals.*

---

* ಬಾ ನನ್ನ ಜೊತೆಯಲ್ಲಿ ನನ್ನೆದೆಯ ಒಲವೆ,
ನಾವಿಬ್ಬರೂ ಸೇರಿ ಆನಂದದಿಂದ
ಬೆಟ್ಟ ಕಣಿವೆಗಳಲ್ಲಿ ವನಗಳಲಿ ಹೊಲದಲ್ಲಿ
ಕಡಿದಾದ ಪರ್ವತದಿ ನಲಿಯೋಣ ಬಾ.
ನಾವಲ್ಲಿ ಸಿಡುಗಲ್ಲುಗಳ ಮೇಲೆ ಕುಳಿತು
ಮಂದೆಯನು ಮೇಯಿಸುವ ಕುರುಬರನ್ನು
ತೊರೆಗಳನು ಮುಮುಕುತಿಹ ನೀರ್ದೀಳಗಳನು
ನೋಡಿ ಪಕ್ಕಿಗಳೊಡನೆ ಹಾಡೋಣ ಬಾ.

ಎಂಬ ಚರಣಗಳು ಹೊರಹೊಮ್ಮಿ ಹರಿಯುತ್ತಿದ್ದುವು. ಜೊತೆಯಲ್ಲಿಯೇ ಜೆ. ಸಿಲ್‌ವಸ್‌ಟರ್ಸ್ ಕವಿಯ—

Were I as base as is the lowly plain,
And you, my Love, as high as heaven above
Yet should the thoughts of me your humble swain
Ascend to heaven, in honour of my Love.

Were I as high as heaven above the plain,
And you, my Love as humble and as low
As are the deepest bottoms of the main,
Whereso'er you were, with you my love should go.

Were you the earth, dear Love, and I the skies,
My love should shine on you like to the sun,
And look upon you with ten thousand eyes
'Till heaven wax'd blind, and till the world were done.

Whereso'er I am, below, or else above you,
Whereso'er you are, my heart shall truly love you.*

---

* ನಾನು ನಿಮ್ನ ಬಯಲಿನೋಲೆ ಕೆಳಗೆ ಇರ್ದರೂ
ನೀನು, ನನ್ನ ಒಲವೆ, ಸಗ್ಗದಲ್ಲಿ ಇರ್ದರೂ
ನಾನು ನಿನ್ನ ದೀನನಲ್ಲ ನೆಲ್ಲ ಭಾವವೂ
ನಿನ್ನ ಪ್ರೇಮಪೂಜೆಗಾಗಿ ಸಗ್ಗಕೇರ್ವುದು !
ನಾನು ಸಗ್ಗದಲ್ಲಿ ನಿನ್ನ ಮೇಲೆ ಇರ್ದರೂ
ನೀನು, ನನ್ನ ಒಲವೆ, ದೀನ ಬಯಲೊಳಿರ್ದರೂ
ನನ್ನ ಪ್ರೇಮದೆದೆಯ ಜೇನು ಸುರಿದು ಕೆಳಗೆ ಇಳಿವುದು,
ಎಲ್ಲಿ ಇರ್ದರೇನು ನಿನ್ನ ತುಟಿಗೆ ತಪ್ಪದಿಳಿವುದು.
ನನ್ನ ಒಲವೆ, ನೀನು ಭೂಮಿಯಾಗಿ ಕೆಳಗೆ ಇರ್ದರೂ
ನಾನು ಗಗನವಾದಡೂನೆ ಬೆಳಗಿ ಬರುವೆ ರವಿಯೊಲು !

ಎಂಬ ದಿವ್ಯವಾದ ಭಾವಗೀತೆಯು ಚಂದ್ರಣ್ಣನ ಸ್ಫೂರ್ತ ಮಧುರ ಕಂಠದಿಂದ ಮತ್ತೆ ಮತ್ತೆ ನಾದಗೊಡಲಾರಂಭಿಸಿತು. ಇದೆಲ್ಲವನ್ನೂ ಗಾಡಿಹೊಡೆಯುತ್ತಿದ್ದ ಮಾರನು ಮೌನವಾಗಿ ಕೇಳಿ ತನ್ನ ಚಿಕ್ಕದೊರೆಯ ಓದಿನ ಪ್ರೌಢಿಮೆಯ ಬಗ್ಗೆ ಅಧಿಕವಾದ ಹೆಮ್ಮೆಯನ್ನು ತಾಳಿ, "ಬುದ್ಧೀ, ನೀವೇಳೋ ಪದಾ ಇಂಗ್ಲೀಸ್ ಮಾತಾಗಿ ಕಾಣ್ತೈತೆ! ಆ ಬಾಸೆನಲ್ಲೂ ಸಂಗೀತ ಉಂಟೇ ಸೋಮಿ? ನಾನೇನೋ ಆ ಸೇಕ್‌ದಾರ್ ಅಮಲ್ದಾರ್ ಸಾಹೇಬರ ಹಾಗೆ ಬರೀ ಕಸ್‌ಪಸ್ ಅಂತಾರೆ ಅಂದ್ಕೊಂಡಿದ್ದೆ." ಎಂದು ಕೇಳಿದನು. ಚಂದ್ರಯ್ಯನಿಗೆ ಆ ಮುಗ್ಧನ ಮಾತನ್ನು ಕೇಳಿ ಅಪ್ರಯತ್ನವಾಗಿ ಕುಲುಕುಲು ನಗು ಬಂದರೂ ಆ ಮಾರನ ಉದಾಹರಣೆಗಳಲ್ಲಿದ್ದ ಧ್ವನಿಯನ್ನು ಗ್ರಹಿಸಿ ಒಂದು ಗಾಢವಾದ ಆಲೋಚನೆಯು ಮೂಡಿತು. "ನಿಜ, ಸೇಕ್‌ದಾರ್, ಅಮಲ್ದಾರ್, ಕಲೆಕ್ಟರ್, ಕಮೀಷನರ್, ಇಂಜನಿಯರ್---ಮುಂತಾದ ಸರ್ಕಾರಿ ನೌಕರರಲ್ಲಿ ಅನೇಕರು ತಮ್ಮ ಉದ್ಯೋಗಕ್ಕೆ ಬೇಕಾದ ಪದವಿಗಳನ್ನೂ ಆಡಳಿತಶಿಕ್ಷಣವನ್ನೂ ಮಾತ್ರ ಪಡೆದು ಬಂದು ಅಧಿಕಾರ ದರ್ಪಗಳಲ್ಲಿ ಯಾಂತ್ರಿಕಮಾನಸರಾಗಿಬಿಡುತ್ತಾರೆ. ಅಧಿಕಾರದ ದರ್ಪಕ್ಕೂ ದಕ್ಷತೆಗೂ ಸಂಬಂಧವು ಅಷ್ಟೇನೂ ಹೆಚ್ಚು ಇಲ್ಲ. ತಾವಾಳುವ ಅಥವಾ ತಾವು ಸೇವೆ ಮಾಡುವ ಜನತೆಯ ಆಶೋತ್ತರಗಳು, ಸುಖದುಃಖಗಳು, ಮತ್ತು ಉದ್ಧಾರಗಳ

ಮೇಣು ಕೋಟಿ ಕಣ್ಗಳಿಂದ ನೋಡಿ ನಿನ್ನನೆದೆಯೊಳಿಡುವೆ
ಕಲ್ಪವಳಿದು ಬಂದರೂ ಸಗ್ಗ ಕುರುಡು ನಿಂದರೂ!
ಎಲ್ಲೆ ಇರು, ನನ್ನ ದೇವಿ, ಕೆಳಗೆ ಅಥವ ಮೇಲೆ
ಅಲ್ಲಿಗೆನ್ನ ಹೃದಯ ಓಡಿ ಬಂದು ಒಲಿವುದು!

ವಿಷಯದಲ್ಲಿ ಅವರಿಗೆ ಸಹೃದಯತೆ ಸಹಾನುಭೂತಿಗಳೊಂದೂ ಇರುವುದಿಲ್ಲ. ದಕ್ಷತೆಯ ಹೆಸರಿನಲ್ಲಿ ಜನತೆಯನ್ನು ಅಧಿಕಾರದ ಬಲದಿಂದ ಹೆದರಿಸಿಕೊಂಡು ತಮ್ಮ ತಮ್ಮ ಸ್ವಾರ್ಥಗಳನ್ನು ಸಾಧಿಸುವುದೇ ಜಾಣತನವೆಂದು ಭಾವಿಸುತ್ತಾರೆ. ತಮ್ಮ ಬಾಳಿನ ರಸವನ್ನೇ ಈ ಲೌಕಿಕಾಡಳಿತದ ಗಾಣದಲ್ಲಿ ಶೋಷಿಸಿ ಕೊಳ್ಳುತ್ತಾರೆ. ಆದರೆ ದಕ್ಷರಾದರೂ ದಯಾರ್ದ್ರಹೃದಯರಾದ ಅಧಿಕಾರಿಗಳೂ ಇಲ್ಲದೆ ಇಲ್ಲ."--ಇಂತೆಲ್ಲಾ ಆಲೋಚನಾ ಪ್ರಪಂಚದಲ್ಲಿ ತೇಲಿಹೋಗುತ್ತಿದ್ದ ಚಂದ್ರಯ್ಯನು ದಾರವನ್ನು ಬೇಗನೆ ಮರೆತುಬಿಡುತ್ತಿದ್ದನು.

ಸುಮಾರು ಒಂಬತ್ತುವರೆ ಗಂಟೆಯ ಸಮಯಕ್ಕೆ ಚಂದ್ರಯ್ಯನು ತನ್ನೂರನ್ನು ತಲುಪಿದನು. ಅವನು ಬರುವ ಹೊತ್ತಿಗೆ ಸರಿಯಾಗಿ ಗೌರಮ್ಮನವರು ಬಿಸಿನೀರು ಕಾಯಿಸಿ ಸಿದ್ಧಪಡಿಸಿದ್ದರು. ಲಲಿತೆಯನ್ನು ನೋಡಬೇಕೆಂಬ ಆತುರ ದಲ್ಲಿ ಚಂದ್ರಣ್ಣನು ಸ್ನಾನವನ್ನೂ ಊಟವನ್ನೂ ಬೇಗಬೇಗನೆ ಪೂರೈಸಿದನು. ನಂತರ ಬಿಳಿಯ ಜುಬ್ಬ ಧೋತ್ರಗಳನ್ನು ಧರಿಸಿ ಕ್ರಾಪನ್ನು ಬಾಚಿ ಚಪ್ಪಲಿಗಳನ್ನು ಮೆಟ್ಟಿ ತೋಟದ ಕಡೆಗೆ ಹೊರಟನು. ಅವನು ತಾಯಿಯಿಂದ ಲಲಿತೆಯು ಅಲ್ಲಿಗೆ ಹೋಗಿರುವಳೆಂದು ಅರಿತುಕೊಂಡಿದ್ದನು. ಅವನು ಗಾಂಭೀರ್ಯದಿಂದ ನಡೆದಿದ್ದರೂ ಆ ನಡಗೆಯಲ್ಲಿ ಅವಸರವಿತ್ತು. ಚಿಕ್ಕಮ್ಮನಾದ ಗಂಗಮ್ಮನು ಪೈರಿನ ನಡುವೆ ತರಕಾರಿ ತೋಟದಲ್ಲಿ ಕಾಯಿಪಲ್ಯಗಳನ್ನು ಬಿಡಿಸುತ್ತಿದ್ದಳು. ಭಾವಿಯ ಹತ್ತಿರ ಆಳುಗಳೊಡನೆ ಕೆಲಸಮಾಡುತ್ತಿದ್ದ ಚಿನ್ನಯ್ಯನು ಚಂದ್ರಯ್ಯನ ಬರವನ್ನು ನೋಡಿ ಸಂತೋಷವನ್ನು ಪ್ರಕಾಶ ಪಡಿಸಿ "ಚಂದ್ರಣ್ಣಾ, ತೋಟದಲ್ಲಿ ಶಾರದಮ್ಮ ಇದ್ದಾಳೆ.

ಫರಂಗಿ ಹಣ್ಣು ಎಳೆನೀರುಕಾಯಿಗಳನ್ನು ಕಿತ್ತುಕೊಟ್ಟು ಬಂದಿದ್ದೇನೆ. ನೀನೂ ಹೋಗಿ ಸವಿಯಪ್ಪಾ." ಎಂದು ನುಡಿದು ಆಳುಗಳ ಕಡೆ ನೋಡಿ ತುಂಟನಗೆ ನಕ್ಕನು. ತನ್ನ ಕಕ್ಕನ ಮಾತಿನ ವ್ಯಂಗ್ಯಾರ್ಥವನ್ನು ಗ್ರಹಿಸಿದ ಚಂದ್ರಯ್ಯನು "ನನ್ನಷ್ಟು ಇದ್ದಾಗ್ಗೆ ನೀವೂ ಹೀಗೇ ಮಾಡುತ್ತಿರಲಿಲ್ಲವೇ ಕಕ್ಕ!" ಎಂದು ನಗುತ್ತಾ ತೋಟದ ಕಡೆ ಹೊರಟನು. ಹಿಂದುಗಡೆ ಚಿನ್ನಯ್ಯನೊಡನೆ ಮಾರ ಮುಂತಾದ ಆಳುಗಳು ಕುಲುಕುಲು ನಗುತ್ತಿದ್ದರು.

ತೋಟದ ಬಾಗಿಲನ್ನು ಪ್ರವೇಶಮಾಡುತ್ತಿದ್ದಂತೆಯೇ ತೋಟದೊಳಗಿದ್ದ ಶಾರದೆಯು ತನ್ನಣ್ಣನನ್ನು ನೋಡಿ, "ಚಂದ್ರಣ್ಣಯ್ಯಾ!!" ಎಂದು ನೆಗೆದು ಓಡಿಬಂದಳು. ಚಂದ್ರಯ್ಯನು ಅವಳನ್ನಪ್ಪಿಕೊಂಡು ಎರಡು ಅಂಗೈಗಳಲ್ಲೂ ಅವಳ ಮುಖವನ್ನು ಹಿಡಿದುಕೊಂಡು ಅವಳ ಹಣೆಗೆ ಮುತ್ತಿಟ್ಟನು. ಶಾರದೆಯು ಅವನ ಬಾಗಿದ ಕತ್ತನ್ನು ತೋಳ್ಗಳಿಂದಪ್ಪಿ ಇನ್ನೂ ಕೆಳಕ್ಕೆ ಜಗ್ಗಿ ಅವನ ಕಿವಿಯಲ್ಲಿ ಏನನ್ನೋ ಪಿಸಿಪಿಸಿ ಉಸುರಿದಳು. ಚಂದ್ರಯ್ಯನ ಮುಖವು ಕೆಂಪೇರಿತು. ನಂತರ ತಂಗಿಯು ಅವನ ಕೈ ಹಿಡಿದುಕೊಂಡು "ಬಾರಣ್ಣಾ ತೋರಿಸುತ್ತೇನೆ." ಎಂದು ಬಲವಂತವಾಗಿ ಎಳೆದುಕೊಂಡು ಹೋಗಲು ಚಂದ್ರಯ್ಯನು ಅವಳನ್ನು ಹಿಂಬಾಲಿಸಿದನು.

ಹಸುರಾದ ಬಳ್ಳಿಯ ಹೊದರಿನಲ್ಲಿ ಮಲ್ಲಿಗೆಯ ಹೂವುಗಳು ರಾಶಿರಾಶಿಯಾಗಿ ಅರಳಿದ್ದುವು. ಅವು ಹಿನ್ನೆಲೆಯಲ್ಲಿ ನೀಲಾಕಾಶದ ನಕ್ಷತ್ರಗಳಂತೆ ರಂಜಿಸುತ್ತಿರಲು ಅವುಗಳ ಮುಂದುಗಡೆ ಲಲಿತೆಯು ನಿಂತಿದ್ದಳು. ಅಂದು ಪ್ರಾತಃಕಾಲ

ಮಾಡಿಕೊಂಡ ಸಿಂಗಾರದ ಜೊತೆಗೆ ತಲೆಯ ತುಂಬಾ ಮಲ್ಲಿಗೆಯ ಹೂವುಗಳನ್ನು ಮುಡಿದು ಆ ಅಪರಂಜಿ ಬಣ್ಣದ ಮೃದು ರೇಶಿಮೆ ಸೀರೆಯ ಸೆರಗನ್ನು ಹಗುರವಾಗಿ ತಲೆಯ ಮೇಲೆ ಮುಸುಗು ಹಾಕಿಕೊಂಡಿದ್ದಳು. ಅವಳ ಗಿಳಿಹಸುರುಬಣ್ಣದ ಕುಪ್ಪಸದ ಮೇಲೆ ಭುಜಗಳಿಗೂ ತಲೆಗೂದಲಿಗೂ ಮಧ್ಯೆ ಇಂಬಾಗಿದ್ದ ಕರ್ಣಪ್ರದೇಶಗಳಲ್ಲಿ ಜಡೆಯ ಬುಡದಲ್ಲಿ ಅಧಿಕವಾಗಿ ಮುಡಿದ ಮಲ್ಲಿಗೆಯ ಹೂವುಗಳು ಎರಡು ಕಡೆಯೂ ಬೆಳ್ಳಗೆ ಇಣಿಕಿ ನೋಡುತ್ತಿದ್ದುವು. ಅವುಗಳ ಮುಂದೆ ಕಿವಿಯ ಬೆಂಡೋಲೆಗಳ ಬಿಳಿಯ ಹರಳುಗಳು ಮಿಂಚಿನ ಹನಿಗಳಂತೆ ಮಿರುಗುತ್ತಿದ್ದುವು. ಆ ಹೊಳಪು ಲಲಿತೆಯ ಹಾಲ್ಗೆನ್ನೆಗಳಲ್ಲೂ ಆ ಸೆರಗಿನ ಹೊಂಬಣ್ಣದಲ್ಲಿಯೂ ಒಂದು ಪ್ರತಿಬಿಂಬಿತ ಪ್ರಕಾಶವನ್ನುಂಟುಮಾಡಿ ಎರಡು ಕಪೋಲಗಳಲ್ಲೂ ಎರಡು ಪುಟ್ಟ ತೇಜೋಮಂಡಲಗಳನ್ನು ಸೃಷ್ಟಿಸಿತ್ತು. ಲಲಿತೆಯು ಚಂದ್ರಯ್ಯನನ್ನು ತನ್ನ ತುಂಬುಗಣ್ಣುಗಳಿಂದ ಬೆಗಡರಿಯದ ಪ್ರೀತಿಯಿಂದ ನೋಡುತ್ತಿದ್ದಳು. ತಾರುಣ್ಯದ ಹೊಸ ಹೊಸ್ತಿಲನ್ನೇರಿದ್ದ ಚಂದ್ರಯ್ಯನ ಕೆನ್ನೆಗಳಲ್ಲಿ ಗುಲಾಬಿ ಬಣ್ಣಕ್ಕೆ ತಿರುಗಿದ ರಕ್ತವು ಉಕ್ಕುವಂತಿತ್ತು. ಕಣ್ಣುಗಳು ತೇಜಃಪುಂಜವಾಗಿದ್ದುವು. ಅವನ ಆಕೃತಿ ಉನ್ನತಗಾಂಭೀರ್ಯದಿಂದ ಧೀರ ಮನೋಹರವಾಗಿತ್ತು. ಅವನ ಕೈಬೆರಳುಗಳು ಸುಕ್ಕಿಲ್ಲದೆ ದುಂಡುದುಂಡಾಗಿದ್ದುವು. ತೆಳುವಾದ ಚಪ್ಪಲಿಗಳಲ್ಲಿ ಕಾಲುಗುರುಗಳು ರಕ್ತದ ಒತ್ತಡದಿಂದ ಕೆಂಪಗೆ ಮಿಂಚುತ್ತಿದ್ದುವು. ಅವನ ಮುಖಮುದ್ರೆಯಲ್ಲಿ ಶೈಶವಾವಸ್ಥೆಯ ಇನ್ನೂ ಮಾಸದ ಮುದ್ದು ಹೊರಸೂಸುತ್ತಿತ್ತು. ಆನಂದವು ತಾಂಡವವಾಡುತ್ತಿತ್ತು. ಲಲಿತೆಯು ಆ ತನ್ನ ಹೃದಯೇಶ್ವರನನ್ನು ಒಂದು

ಸಾರಿ ಕಣ್ಣು ತುಂಬಾ ಚೆನ್ನಾಗಿ ನೋಡಿದಳು. ಅವಳ ಹೃದಯವೂ ಅದರೊಂದಿಗೆ ಶರೀರವೂ ಭಾವಾಧಿಕ್ಯದಿಂದ ತಲ್ಲಣಿಸಿದುವು. ಲಜ್ಜೆಯು ಅಗ್ನಿಜ್ವಾಲೆಯಂತೆ ಅವಳ ಕೆನ್ನೆಗಳಿಗೂ ತುಟಿಗಳಿಗೂ ನೆಗೆದು ಚಿಮ್ಮಿತು. ತಲೆ ಬಾಗಿಸಿದಳು. ಆನಂದಾಶ್ರುಗಳು ಅವಳ ಎರಡೂ ಕೆನ್ನೆಗಳಲ್ಲಿ ಮುತ್ತುಗಳಂತೆ ಉದುರುತ್ತಿದ್ದುವು!

ಚಂದ್ರಯ್ಯನು ಒಂದು ವರ್ಷಕಾಲ ಅಗಲಿದ್ದ ಆ ತನ್ನ ಮುದ್ದು ಮೋಹನೆಯ ಸೌಂದರ್ಯದಲ್ಲಿ ಆಗಿದ್ದ ನವೀನವಾದ ಬದಲಾವಣೆಯಿಂದ ಬೆಕ್ಕಸಬೆರಗಾದನು! ಅವಳ ಮುಖದ ಕಾಂತಿಯ ದಿವ್ಯಮನೋಜ್ಞತೆಯಿಂದ ಅವನಲ್ಲಿ ಭಾವಾವೇಶವುಂಟಾಯಿತು. ಲಲಿತೆಯು ಹದಿನಾರನೆಯ ವರ್ಷದಲ್ಲಿ ಕಾಲಿಟ್ಟು ಒಂದು ತಿಂಗಳಾಗಿತ್ತು. ಅವನು ಈಗ ಕಾಣುತ್ತಿದ್ದುದು ಶರತ್ಕಾಲದ ನೀಲಾಕಾಶದಲ್ಲಿ ಹೊಂಬೊನ್ನದಲ್ಲಿ ಮಿಂದ ಮುಗಿಲರಾಶಿಯ ನಡುವೆ ಷೋಡಶಕಲೆಗಳಿಂದ ರಾರಾಜಿಸುವ ಪೂರ್ಣಿಮೆಯ ಚಂದ್ರಮಂಡಲವೋ? ಹೇಮಂತ ಋತುವಿನಲ್ಲಿ ತೆಳ್ಳನೆ ಮುಸುಗಿದ ಮಂಜಿನ ದಿಗಂತದಲ್ಲಿ ಬೆಳ್ಳನೆ ಮೂಡಿಬರುವ ತಂಪಾದ ಸೂರ್ಯಮಂಡಲವೋ?- ಚಂದ್ರಯ್ಯನು ಸೌಂದರ್ಯಾನುಭೂತಿಯಿಂದ ಸಮಾಧಿಯನ್ನನುಭವಿಸುವವನಂತೆ ತೆಂಗಿನ ಮರವೊಂದನ್ನು ಒರಗಿ ಲಲಿತೆಯನ್ನು ನೋಡುತ್ತಾ ಕಲ್ಲಿನಪ್ರತಿಮೆಯಂತೆ ನಿಂತುಬಿಟ್ಟನು. ಬಣ್ಣಿಸಲಾರದ ಸಂತಸದ ತೆರೆಗಳ ಚೆಲುವೆಯು ನಿರಂತರವಾಗಿ ಅವನ ಹೃದಯವೇಲೆಯನ್ನು ತುಂಬಿತುಳುಕಿ ಅಪ್ಪಳಿಸುತ್ತಾ ತಳಮಳಗೊಳಿಸಿದುವು. ತನ್ನ ಆರಾಧ್ಯದೇವತೆಯು ಪ್ರತ್ಯಕ್ಷವಾದರೆ ಭಕ್ತನು ಮೈಮರೆಯುವಂತೆ ಚಂದ್ರಯ್ಯನು

ನಿಮಿಷಕಾಲ ಹಿಡಿಸಲಾರದ ಆತ್ಮಸಂಭ್ರಮದಿಂದ ಮೂರ್ಛೆ ಹೋಗುವವನಂತೆ ಕಣ್ಣುಮುಚ್ಚಿ ತನ್ನ ಎಡದೋಳನ್ನೆತ್ತಿ ಹಣೆಗೆ ಒರಗಿಸಿಕೊಂಡನು. ಬೆವರು ಅವನ ಹಣೆಯಲ್ಲಿ ತಟ ತಟ ಸುರಿಯಲಾರಂಭಿಸಿತು! ಶಾರದೆಯು "ಅಣ್ಣಾ! ಅಣ್ಣಾ! ಏನಾಯ್ತಣ್ಣಾ!" ಎಂದು ಚೀರಿದಳು. ಲಲಿತೆಯು ಬೆಚ್ಚಿ ತಲೆ ಯನ್ನೆತ್ತಿ ಚಂದ್ರಯ್ಯನ ಸ್ಥಿತಿಯನ್ನು ನೋಡಿ "ಹಾ ಭಾವ ಯ್ಯಾ!!" ಎಂದು ಆರ್ತಧ್ವನಿಯಿಂದ ಓಡಿಬಂದು ಅವನನ್ನು ತಬ್ಬಿಹಿಡಿದಳು. ತನ್ನ ಭಾವಾವೇಶಕ್ಕೆ ತಾನೇ ತಡೆಯಲಾರದೆ ಹೋದ ಚಂದ್ರಯ್ಯನು ಬಹು ಪ್ರಯಾಸದಿಂದ ಸಂಯಮ ವನ್ನು ಸಾಧಿಸಿ ಧೀರಗಂಭೀರ ಹರ್ಷೋಲ್ಲಾಸವನ್ನು ಮತ್ತೆ ತಾಳಿ ತನ್ನನ್ನು ಆಲಿಂಗಿಸಿ ಹಿಡಿದುಕೊಂಡಿದ್ದ ಲಲಿತೆಯ ಅಶ್ರುಪೂರಿತವಾದ ನೇತ್ರಗಳನ್ನು ನೋಡಿ, "ಲಲಿತಾ, ನನ್ನ ಹೃದಯೇಶ್ವರೀ! ನನ್ನ ಬಾಳಿನ ಬೆಳಕೇ! ನನ್ನ ಜೀವನದ ಪೂರ್ಣತೆಯೇ! ನನ್ನ ಆದರ್ಶದೇವತೆಯೇ! ನಿನ್ನ ಪಾದ ರೇಣುವೊಂದು ಈ ದೀನನ ಹಣೆಗೆ ಹತ್ತಿದರೆ ನನ್ನ ಜನ್ಮವು ಸಾರ್ಥಕವಾಗುವುದೆಂದು ತಿಳಿದಿದ್ದೇನೆ. ಇನ್ನು ಈ ನಿನ್ನ ಶರೀರಸ್ಪರ್ಶವನ್ನೇ ನನಗೊಪ್ಪಿಸುವೆಯಾ ದೇವಿ? ಹಾಗಾದರೆ ಈ ಭೂಮಿಯಲ್ಲಿ ನನಗಿಂತ ಧನ್ಯರಿನ್ನಿಲ್ಲ!" ಎಂದು ನುಡಿ ದನು. ಅಷ್ಟರಲ್ಲಿ ಲಲಿತೆಯ ಮುಖವು ಚಂದ್ರಯ್ಯನ ಎದೆಯಲ್ಲಿ ಬಚ್ಚಿಟ್ಟುಕೊಂಡಿತ್ತು. ಅವಳ ತುಟಿಗಳು ತುಳುಕುವ ಆನಂ ದಕ್ಕೆ ನುಡಿಯ ದಾನವನ್ನು ಮಾಡಲಾರದೆ ನಡುಗುತ್ತಿದ್ದುವು. ಅವಳ ಕೆನ್ನೆಗಳ ತುಂಬಾ ಆನಂದಾಶ್ರುಗಳು ಸುರಿದು ಚಂದ್ರ ಯ್ಯನ ಎದೆಯನ್ನು ತೊಯ್ಸಿದುವು. ನಂತರ ಮೆಲ್ಲನೆ ಅವಳು ಬಾಗಿ ಚಂದ್ರಯ್ಯನ ಪಾದಗಳನ್ನು ತನ್ನ ಕರತಲಗಳಿಂದ

ಮುಟ್ಟಿ ಕಣ್ಣುಗಳಿಗೊತ್ತಿಕೊಂಡಳು. ಅಷ್ಟುಹೊತ್ತಿಗೆ ಪಕ್ಕದಲ್ಲಿ ನಾಚಿಗೆಸಂಭ್ರಮಗಳಿಂದ ದಿಕ್ಕು ತೋರದೆ ನಿಂತಿದ್ದ ತಂಗಿ ಶಾರದೆಯನ್ನು ನೋಡಿ ಚಂದ್ರಯ್ಯನಿಗೆ ನಾಚಿಗೆಯುಂಟಾಯಿತು. ಲಲಿತೆಯ ತೋಳ್ಸೆರೆಯಿಂದ ಮೆಲ್ಲನೆ ಬಿಡಿಸಿಕೊಂಡು ನಸುನಗೆಯಿಂದ "ಹೊತ್ತಾಯಿತು. ಹೋಗೋಣ ಬನ್ನಿ." ಎಂದು ನುಡಿದು ಮುಂದಾಗಿ ಹೊರಟೇ ಬಿಟ್ಟನು! ಅವನ ನಡಗೆಯಲ್ಲಿ ಪದಿನಾಲ್ಕು ಲೋಕಗಳನ್ನು ಜಯಿಸಿದ ಹೆಮ್ಮೆ ಅಭಿಮಾನಗಳು ತುಳುಕುತ್ತಿದ್ದುವು!



# ಏಳನೆಯ ದಳ

## ಮರ್ತ್ಯದ ಕತ್ತರಿ

ನಡೆದಿಹುದು ನಡೆದಿಹುದು ನಿತ್ಯ ಬಲಿಪೂಜೆ
ಮರ್ತ್ಯದರೆಬಂಡೆಯಲಿ ಕಗ್ಗೊಲೆಯ ಪೂಜೆ !
ತಾನೊಂದು ನೆನೆದರಾ ವಿಧಿ ನೆನೆವುದೊಂದು,
ಮಾನವನು ಮಮತೆಯಲಿ ಸುಗಿಯೆ ಬೆಂದು !

—ಕುಮುದ

ಆವ ಜನ್ಮದ ಋಣವೊ, ಆವ ಕರ್ಮದ ಕಣವೊ ।
ಮಾವಾಗಿ ಬೇವಾಗಿ ಸಂಸಾರ ವನದಿ ॥
ಜೀವಕೀಂಟಿಪುವು ಮಾದಕದ ರಸಪಾನಗಳ ।
ಭಾವಜ್ವರಂಗಳವು—ಮಂಕುತಿಮ್ಮ ॥

—ಡಿ.ವಿ.ಜಿ.

ಎಲೈ ಮಾನವನೆದೆಯ ಹುಚ್ಚು ಹಾರೈಕೆಯೇ, ತಾಂಡವನಂತೆ ನೀನು ಕುಣಿದರೇನು? ಸಾಗರದ ತರಂಗಪರ್ವತದಂತೆ ಆರ್ಭಟಿಸಿದರೇನು ? ಪ್ರಳಯವೇಗದಿಂದ ನೀನು ಮುನ್ನುಗ್ಗಿದರೇನು ? ಅದೋ, ಮರ್ತ್ಯಲೋಕದ ಅರೆಬಂಡೆಯ ಘರ್ಷಣೆಗೆ ನಿನ್ನ ತಲೆಯೊಡೆದು ಪುಡಿಪುಡಿಯಾಗಿ ರಕ್ತದ ತುಂತುರುವನಿಗಳು ನೀಲಗಗನವನ್ನು ನಿತ್ಯವೂ ಓಕುಳಿಗೈಯುತ್ತಿವೆ !

ಹಾರೈಸು ಹಾರೈಸು ಹಾರೈಸು ಜೀವ
ಹಾರೈಸು ನೀನಾಗುವನ್ನೆಗಂ ದೇವ-*

---

* ಶ್ರೀ ಕುವೆಂಪು ಅವರ 'ಅಗ್ನಿಹಂಸ'ದಲ್ಲಿ 'ಹಾರೈಕೆ' ಎಂಬ ಕವನದಿಂದ.

ಎಂದು ಕವಿಕೋಗಿಲೆಯು ಹಾಡಿರುವುದಲ್ಲವೆ? ಅಹುದು! ಅಹುದು! ಆದರೂ ಎಲ್ಲೈ ಮಾನವನೆದೆಯ ಹಾರೈಕೆಯೆಂಬ ನಿತ್ಯತಬ್ಬಲಿಯೇ, ನಾನು ಬಲ್ಲೆನು ನಿನ್ನ ನೋವನ್ನು. ಬೆಂದೆದೆಗಳೇ ನಿನ್ನ ಆರತಿಯಲ್ಲವೇ? ಕಂಬನಿಯುಪ್ಪುನೀರೇ ನಿನಗೆ ನೈವೇದ್ಯವಲ್ಲವೇ? ವಿರಹಿಗಳಾಗಿ ಸದಾ ನೋಯುತ್ತಿರುವ ಆದರ್ಶ ಪ್ರೇಮಿಗಳನ್ನು ಹೋಗಿ ಕೇಳು. ಪತಿಗಳನ್ನು ಕಳೆದುಕೊಂಡು ನವೆಯುತ್ತಿರುವ ವಿಧವೆಯರನ್ನು ಹೋಗಿ ಕೇಳು. ಹೆತ್ತ ಕರುಳನ್ನು ಯಮನಿಗೆ ತುತ್ತಿತ್ತು ಶೋಕ ಸಂತಪ್ತರಾದ ಮಾತಾಪಿತೃಗಳನ್ನು ಹೋಗಿ ಕೇಳು. ನಿತ್ಯವೂ ಕಣ್ಣೀರಿನಲ್ಲಿ ಕೈತೊಳೆವ ದೀನದರಿದ್ರರನ್ನು ಹೋಗಿ ಕೇಳು. ವಿಶ್ವರಾಜಕೀಯದ ಪಟುಗಳು ತಾವೇ ಎಂಬ ಹೆಮ್ಮೆಯಿಂದ ಬೀಗಿ ಯಂತ್ರಬಲದ ದೌಷ್ಟ್ಯದಿಂದ ವರ್ತಿಸುವ ನರರಾಕ್ಷಸರ ಕೃತ್ರಿಮಯುದ್ಧಗಳಿಗೆ ಸಿಕ್ಕಿ ಅಸುಗಳನ್ನು ಪಶುಗಳಂತೆ ಕಳೆದುಕೊಳ್ಳುತ್ತಿರುವ ದೀನರಾಷ್ಟ್ರಗಳ ದುರದೃಷ್ಟಶಾಲಿಗಳನ್ನು ಹೋಗಿ ಕೇಳು. ವಿವಿಧ ಮಾನವರ ವೈವಿಧ್ಯಮಯವಾದ ಆಸೆ ಪ್ರತ್ಯಾಸೆಗಳ ಘರ್ಷಣೆಯೆಂಬ ಅಲಗುಗಳುಳ್ಳ ಮರ್ತ್ಯದ ಕತ್ತರಿಯಲ್ಲಿ ನೀನು ನಿತ್ಯಬಲಿ! ಎಂದು ನೀನು ಜೀವತ್ವವನ್ನು ತೊರೆದು ದೇವತ್ವವನ್ನು ಸಂಪಾದಿಸುವುದು? ನಿನ್ನನ್ನು ನೀನು ತ್ಯಾಗಮಾಡದ ಹೊರತು ಅನ್ಯಥಾ ಮಾರ್ಗವಿಲ್ಲ! ನಿನ್ನನ್ನು ನೀನು ಆತ್ಮಾರ್ಪಣ ಮಾಡಿಕೊಂಡ ಹೊರತು ಅನ್ಯಥಾ ಮುಕ್ತಿಯಿಲ್ಲ! ನಿನಗಾವುದು ಬಹು ಸಮೀಪವಾಗಿ ಕಾಣುವುದೋ ಆದು ನಿಜವಾಗಿಯೂ ನಿನ್ನಿಂದ ಬಹು ದೂರವಾಗಿದೆ! ಯಾವುದರ ಮೇಲೆ ನಿನಗೆ ಅತಿಯಾದ ಮೋಹವಿದೆಯೋ ಅದರಿಂದ ನಿನಗೆ ಅತಿಯಾದ ದುಃಖವಿದೆ!

ಆ ಮೋಹವನ್ನು ಖಂಡಿಸು. ನಿನ್ನನ್ನು ನೀನು ಗೆಲ್ಲು. ಅನಂತ ತ್ಯಾಗಕ್ಕೆ ಸಿದ್ಧನಾಗು. ಆಗಲೇ ನಿನಗೆ ಅದೋ ಜ್ಯೋತಿರ್ಮಯನಾದ ಮಹಾದೇವನು ಕಾಣಿಸಿಕೊಂಡು ನಿನ್ನನ್ನು ಎತ್ತಿಕೊಳ್ಳುತ್ತಾನೆ! ಕರುಣಾಸಾಗರನಾದ ಭಗವಂತನು ನಿನ್ನನ್ನು ಎದೆಗಪ್ಪಿಕೊಳ್ಳುತ್ತಾನೆ!

ಕೆಲವು ದಿನಗಳಿಂದ ಶ್ಯಾಮಯ್ಯನವರು ಗುಹ್ಯತರವಾದ ಮಹಾಶೋಕಕ್ಕೆ ಸಿಕ್ಕಿ ಸಂಕಟದಿಂದ ನರಳುತ್ತಿದ್ದರು. ಆದರೆ ತಮ್ಮ ದುಃಖಕ್ಕೆ ಕಾರಣವನ್ನು ಮಾತ್ರ ಯಾರಿಗೂ ತಿಳಿಸಲಾರದೆ ತಾವೇ ಅದರ ನೋವನ್ನೆಲ್ಲಾ ಅನುಭವಿಸುತ್ತಿದ್ದರು. ಅವರ ಆಂತರ್ಯವೇದನೆಯಿಂದ ಅವರ ಆರೋಗ್ಯವು ಕೆಡುತ್ತಿತ್ತು. ಮೊದಲೇ ಪುಷ್ಟವಲ್ಲದ ಸಡಿಲವಾದ ಶರೀರ. ಯೋಚನೆಗಳ ತಾಪತ್ರಯದಿಂದ ಬೇರೆ ಬೆಂದುಹೋಗುತ್ತಿತ್ತು. ಅರೆಬರೆ ನರೆಯಾದ ತಲೆಗೂದಲನ್ನೂ ಗಡ್ಡವನ್ನೂ ಜ್ವರದ ನಿಮಿತ್ತದಿಂದ ಕೆಲವು ದಿನಗಳಿಂದ ಬೋಳಿಸಿರಲಿಲ್ಲವಾದುದರಿಂದ ತಮ್ಮ ವಯಸ್ಸಿಗಿಂತ ಹೆಚ್ಚು ಸೊರಗಿದವರಂತೆ ಕಾಣುತ್ತಿದ್ದರು. ಪ್ರತಿದಿನವೂ ರಾತ್ರಿ ಮಲಗಿದಾಗ ಪಕ್ಕದಲ್ಲಿಯೇ ಮಲಗುತ್ತಿದ್ದ ಲಲಿತೆಯು ತಂದೆಯೊಡನೆ ನಾನಾ ರೀತಿಯ ಸಂಭಾಷಣೆಗಳನ್ನು ಮಾಡುತ್ತಾ ನಡುನಡುವೆ ತಂದೆಯ ಅನಾರೋಗ್ಯಕ್ಕೆ ಕಾರಣವನ್ನು ಅನೇಕ ಸಾರಿ ಕೇಳಿದ್ದಳು. ಆದರೆ ಶ್ಯಾಮಯ್ಯನವರು, " ಏನೂ ಇಲ್ಲಮ್ಮಾ. ಏನೋ ಸ್ವಲ್ಪ ಬಿಸಿಲಿನ ತಾಪಕ್ಕೆ ಮೈ ಬೆಚ್ಚಗಾಗಿದೆ. ಮೊದಲೇ ಮೆದುವು ಶರೀರ. ಅಂಥಾದ್ದೇನೂ ಭಯವಿಲ್ಲಮ್ಮ ಲಲಿತಾ. ನನಗಾಗಿ ನೀನೇಕೆ ಎದ್ದಿರುತ್ತಿ? ಮಲಗಮ್ಮಾ." ಎನ್ನುತ್ತಿದ್ದರು. ಆದರೆ ತಂದೆಯು ಯಾವುದೋ ಗುಹ್ಯ

ಶೋಕದಿಂದ ನರಳುತ್ತಿದ್ದಾರೆಂಬುದು ಲಲಿತೆಯ ಮನಸ್ಸಿಗೆ ಹೊಳೆಯದೆ ಹೋಗಲಿಲ್ಲ. "ಒಂದು ಪಕ್ಷ ಅದು ನನ್ನ ಮದುವೆಯನ್ನು ಕುರಿತೇ ಇರಬಹುದು. ತಮ್ಮ ಒಬ್ಬನೇ ಸೋದರಳಿಯನ ಹೆಸರನ್ನು ಹೇಳುತ್ತಿದ್ದರು. ಕೆಲವು ದಿನಗಳಿಂದ ಅದನ್ನೂ ಬಿಟ್ಟರು. ಆತನಿಗೆ ಬೇರೆಯ ಕಡೆ ಹೆಣ್ಣು ದೊರೆತಿರಬಹುದೇ? ಆತನ ಹೆಸರನ್ನು ಹೇಳುತ್ತಿದ್ದರೇ ವಿನಃ ಆತನಿಗೆ ನನ್ನನ್ನು ಕೊಟ್ಟು ಮದುವೆಮಾಡಬೇಕೆಂದು ಒಂದು ದಿನವೂ ಹೇಳಿಲ್ಲ. ನನ್ನನ್ನು ಚಂದ್ರಯ್ಯಭಾವನಿಗೇ ಕೊಡುವುದು ನಿಶ್ಚಯ. ಆದರೆ ಚಂದ್ರಯ್ಯಭಾವ ಇನ್ನೂ ಓದುತ್ತಿದ್ದಾನೆ. ಇನ್ನೂ ಮುಂದೆ ಮದ್ರಾಸಿಗೆ ಹೋಗಿ ಎಂ.ಎ. ತರಗತಿಯನ್ನೂ ಓದಬೇಕೆಂದಿದ್ದಾನೆ. ಗೌರಮ್ಮಯ್ಯನು ಈಗಲೇ ತಮ್ಮ ಮಗನ ಮದುವೆ ಮಾಡಲು ಒಪ್ಪುತ್ತಾರೋ ಇಲ್ಲವೋ? ಆದರೆ ನನಗಾಗಲೇ ಹದಿನಾರರಲ್ಲಿ ನಡೆಯುತ್ತಿದೆ. ವಯಸ್ಸಾದ ಹೆಣ್ಣನ್ನು ಹಾಗೇ ಇಟ್ಟುಕೊಂಡಿದ್ದರೆ ಜನಗಳ ಮತ್ತು ಮತಸ್ಥರ ನಿಂದೆ ತಪ್ಪುವಂತಿಲ್ಲ. ಈ ಸೂಕ್ಷ್ಮವಾದ ವಿಷಯವನ್ನು ಬಗೆಹರಿಸುವ ಬಗೆ ಹೇಗೆ? ಗೌರಮ್ಮಯ್ಯನವರಲ್ಲಿ ಇದನ್ನು ಬಾಯಿ ಬಿಡುವುದು ಹೇಗೆ?" ಹೀಗೆಲ್ಲಾ ತನ್ನ ತಂದೆ ಯೋಚಿಸುತ್ತಿರಬಹುದೆಂದು ತಂದೆಯ ಸಂಕಟಕ್ಕೆ ನಿಜವಾದ ಕಾರಣವನ್ನರಿಯದ ಲಲಿತೆಯು ಭಾವಿಸುತ್ತಿದ್ದಳು.

ಆದರೆ ಲಲಿತೆಯಿಲ್ಲದ ಸಮಯಗಳಲ್ಲಿ ಶ್ಯಾಮಯ್ಯನವರು ಒಬ್ಬರೇ ಕುಳಿತುಕೊಂಡು ಕೆನ್ನೆಯ ಮೇಲೆ ಕೈಹೊತ್ತು ಮನೆಯ ಜಂತೆಗಳನ್ನೇ ನೋಡುತ್ತಾ, "ಅಯ್ಯೋ ದೇವರೇ, ಎಂತಹ ಧರ್ಮಸಂಕಟವನ್ನು ತಂದುಹಾಕಿದೆಯಪ್ಪಾ! ಶತ್ರುಗಳ ಮಧ್ಯದಿಂದ ತಪ್ಪಿಸಿಕೊಂಡು ಹೋಗಬಹುದು.

ವಿಶ್ವಾಸಿಗಳ ಸೆರೆಯಿಂದ ತಪ್ಪಿಸಿಕೊಂಡು ಹೋಗುವುದು ಹೇಗಪ್ಪಾ? ಪ್ರಪಂಚದಲ್ಲಿ ಎಲ್ಲಾ ಬಂಧನಗಳಿಗಿಂತಲೂ ಪ್ರೇಮವಿಶ್ವಾಸಗಳ ಬಂಧನವು ಗುರುತರವಾದುದೆಂಬುದನ್ನು ನಾನು ಕಂಡಂತಾಯಿತು! ಅಯ್ಯೋ, ಇಲ್ಲಿಗೆ ಬರುವ ಮುಂಚೆ ನನ್ನ ಸ್ಥಿತಿಯನ್ನು ಜಗದೀಶ್ವರನೇ ಬಲ್ಲ. ಮೊದಲು ನನಗಾದ ಎರಡು ಗಂಡುಮಕ್ಕಳೂ ಒಂದು ಹೆಣ್ಣುಮಗುವೂ ಕ್ರಮವಾಗಿ ಮೂರು ವರುಷಗಳು ತುಂಬುವುದರೊಳಗೇ ತೀರಿಕೊಂಡವು. ಕೊನೆಗೆ ಲಲಿತೆಯನ್ನು ಹಡೆದ ಒಂದು ವರ್ಷದಲ್ಲಿಯೇ ನನ್ನ ಹೆಂಡತಿ ಮರಣವನ್ನಪ್ಪಿದಳು. ಜೀವನದಲ್ಲಿಯೆ ಜುಗುಪ್ಸೆ ಹುಟ್ಟಿ ಊರೂರು ತಿರುಗಲಾರದೆ ಆ ನನ್ನ ಉಪಾಧ್ಯಾಯ ವೃತ್ತಿಗೂ ರಾಜೀನಾಮೆ ಕೊಟ್ಟೆ. ಉಳಿದೊಬ್ಬ ಮಗಳೇ ನನಗೆ ಗಂಡುಮಗುವೆಂದೂ ನನ್ನ ಜೀವನದ ಸರ್ವಸ್ವವೆಂದೂ ತಿಳಿದು ಒಳ್ಳೆಯ ಆಶ್ರಯವನ್ನು ಹುಡುಕಿಕೊಂಡು ನಾನೇ ಬಂದೆ. ನನ್ನ ಮಗಳ ಪುರಾಕೃತಪುಣ್ಯದಿಂದ ಇಂಥಾ ಅನ್ಯಾದೃಶವಾದ ಆದರ್ಶವಾದ ಆಶ್ರಯವು ದೊರಕಿತು. ಗೌರಮ್ಮನವರಂಥಾ ತಾಯಿಯನ್ನು ನಾನು ಇನ್ನೆಲ್ಲಿಯೂ ಕಾಣಲಿಲ್ಲ. ಚಂದ್ರಯ್ಯನಂಥಾ ಪುತ್ರರತ್ನವನ್ನು ನಾನು ಬೇರೆಲ್ಲೂ ನೋಡಲಿಲ್ಲ. ಈಗಲಾದರೊ ಅವರು ಲಲಿತೆಯನ್ನು ತಮ್ಮ ಮನೆಯ ಜ್ಯೋತಿಯನ್ನಾಗಿಯೇ ಮಾಡಿಕೊಳ್ಳಬೇಕೆಂಬ ಹೆಬ್ಬಯಕೆಯನ್ನು ತಾಳಿದಂತಿದೆ. ನನ್ನ ಮಗಳಾದರೋ ಚಂದ್ರಯ್ಯನಿಗೆ ತನ್ನ ಜೀವವನ್ನೇ ಅರ್ಪಿಸಿದ್ದಾಳೆ. ನನಗಾದರೋ ಇರುವೊಬ್ಬ ಸೋದರಳಿಯ ಜಯರಾಮುವಿಗೆ ಲಲಿತೆಯನ್ನು ಕೊಡಬೇಕೆಂಬ ಆಸೆ. ಅವನೂ ಕೂಡ ಲಲಿತೆಯನ್ನು ಬೇರೆಯವರಿಗೆ ಬಿಡುವಂತಿಲ್ಲ. ಈ ಧರ್ಮಸಂಕಟದಿಂದ ಪಾರಾಗುವ ಬಗೆ

ಹೇಗೋ ತಿಳಿಯದಾಗಿದೆ. ಈ ವಿಷಯವು ತಿಳಿದಾಕ್ಷಣವೇ ಗೌರಮ್ಮ, ಚಂದ್ರಯ್ಯ, ಲಲಿತೆ—ಈ ಮೂವರಿಗೂ ಸಿಡಿಲು ಬಡಿದಂತಾಗುತ್ತದೆ. ಈ ಮನೆಗೆ ದುಃಖದ ಕತ್ತಲು ಮುಸುಗುತ್ತದೆ. ಹೇಳದೆ ಇದ್ದರೆ ಇನ್ನು ಒಂದು ತಿಂಗಳೊಳಗಾಗಿ ಜಯರಾಮುವು ನಮ್ಮನ್ನು ಕರೆದುಕೊಂಡು ಹೋಗಲು ಬರುತ್ತೇನೆಂದು ಕಾಗದ ಬರೆದಿದ್ದಾನೆ. ಅವನು ಬಂದ ದಿನವೇ ಈ ಸುದ್ದಿಯನ್ನೆಲ್ಲಾ ತಿಳಿಸಿದರೆ ಎಂತಹ ಮೋಸವಾಗುತ್ತದೆ! ಎಂತಹ ಅನಾಹುತವಾಗುತ್ತದೆ! ಹೇಳಲು ಬಾಯಿಬಾರದು. ಹೇಳದೆ ಇರುವಂತಿಲ್ಲ. ಅಯ್ಯೋ ದೇವರೇ, ಎಂತಹ ಧರ್ಮಸಂಕಟಕ್ಕೆ ಸಿಲುಕಿಸಿದೆಯಪ್ಪಾ!" ಎಂದು ಬಹಳ ದೀರ್ಘವಾಗಿ ಆಲೋಚಿಸುತ್ತಾ ನಿಟ್ಟುಸಿರು ಬಿಡುತ್ತಿದ್ದರು. ಅವರ ಶುಷ್ಕವಾದ ಕಣ್ಣುಗಳೂ ತೊಯ್ದು ಒಂದೆರಡು ಕಂಬನಿಗಳು ಕೆನ್ನೆಗಿಳಿಯುತ್ತಿದ್ದುವು.

ಒಂದು ರಾತ್ರಿ ಮಲಗಿದಾಗ ತಂದೆಯು ತುಂಬಾ ಶೋಚನೀಯವಾಗಿ ನರಳುತ್ತಿದ್ದುದು ಲಲಿತೆಗೆ ಗೊತ್ತಾಯಿತು. ತನ್ನ ಹಾಸಿಗೆಯಿಂದ ಮೆಲ್ಲನೆ ಎದ್ದು ತಂದೆಯ ಬಳಿಗೆ ಹೋಗಿ ಕುಳಿತಳು. ಮೆಲ್ಲನೆ 'ಅಣ್ಣಾ' ಎಂದು ಶ್ಯಾಮಯ್ಯನವರ ಹಣೆಯ ಮೇಲೆ ತನ್ನ ಅಂಗೈಯನ್ನಿರಿಸಿದಳು. ಅವಳ ಕೈ ಕೆಂಡದಿಂದ ಬೆಂದಂತಾಯಿತು! ತಕ್ಷಣವೇ "ಅಯ್ಯೋ! ಅಣ್ಣಾ! ಕುದಿಯುವ ಜ್ವರಬಂದುಬಿಟ್ಟಿದೆಯಲ್ಲಣ್ಣಾ!!" ಎಂದು ಅಳುವುದಕ್ಕಾರಂಭಿಸಿದಳು. ದುಃಖವನ್ನು ಸ್ವಲ್ಪ ತಡೆದುಕೊಂಡು ದೀಪವನ್ನು ಹಚ್ಚಿದಳು. ಇದ್ದಕ್ಕಿದ್ದಂತೆ ಶ್ಯಾಮಯ್ಯನವರು ಬಿಕ್ಕಿ ಬಿಕ್ಕಿ ಅಳುವುದಕ್ಕಾರಂಭಿಸಿದರು. ಲಲಿತೆಗೆ ಕರುಳು ಕಿವಿಚಿದಂತಾಗಿ ದಿಗಿಲು ಬಡಿದವಳಂತೆ ತಂದೆಯನ್ನು

ತಬ್ಬಿಕೊಂಡು ತಂದೆಯ ಅಶ್ರುಪೂರಿತವಾದ ನೇತ್ರಗಳಲ್ಲಿ ತನ್ನ ಕಣ್ಣಿಟ್ಟು "ಇದೇಕಣ್ಣಾ ಹೀಗೆ ಅಳುತ್ತೀರಿ. ನನ್ನನ್ನು ಬಿಟ್ಟು ಹೋಗಬೇಡಣ್ಣಾ. ಓಡಿಹೋಗಿ ಚಂದ್ರಯ್ಯ ಭಾವ ನನ್ನು ಕರೆದು ತರುತ್ತೇನಣ್ಣಾ." ಎಂದು ಮೇಲೇಳುತ್ತಿದ್ದಳು. ಅಷ್ಟರಲ್ಲಿ ಶ್ಯಾಮಯ್ಯನವರು, "ಕಂದಾ, ಎಲ್ಲಿಗೂ ಹೋಗ ಬೇಡ. ಇಲ್ಲಿ ಬಾಮ್ಮ. ನನ್ನ ಹತ್ತಿರ ಕುಳಿತುಕೋ." ಎಂದರು. ಲಲಿತೆಯು ತಂದೆಯ ಆಜ್ಞೆಯಂತೆ ಕುಳಿತಳು. ಶ್ಯಾಮಯ್ಯ ನವರು ಲಲಿತೆಯ ಗಲ್ಲವನ್ನು ಹಿಡಿದು, ಅವಳ ತಲೆಗೂದ ಲನ್ನು ನೇವರಿಸಿ, ಬಹಳ ದೀನಸ್ವರದಿಂದ, "ಲಲಿತಾ, ನನ್ನಮ್ಮಾ, ನಿನ್ನ ಮುದಿತಂದೆಯ ಮೇಲೆ ನಿನಗೆಷ್ಟು ದಯ ವಮ್ಮಾ! ನಿನ್ನ ಗುಣಚಾರಿತ್ರಗಳಿಂದಲೇ ನಾನು ಆನಂದ ಪಟ್ಟಿದ್ದೇನಮ್ಮಾ. ಗೌರಮ್ಮನಂಥಾ ಅತ್ತೆಯನ್ನು ಪಡೆದು ಚಂದ್ರಯ್ಯನಂಥಾ ಪತಿಯನ್ನು ಹೊಂದಿ ಈ ಮನೆಯಲ್ಲಿ ಮಂಗಳಗೌರಿಯಂತೆ ಸುಖವಾಗಿ ಬಾಳಮ್ಮಾ. ನಾನು ಸಂತೋಷವಾಗಿ ಕಣ್ಣು ಮುಚ್ಚಿಕೊಳ್ಳುತ್ತೇನೆ. ತಾಯಿ, ಇನ್ನು ಒಂದು ವಾರವು ನಾನು ಬದುಕಿದ್ದರೆ ಅದೇ ಹೆಚ್ಚು. ಆದರೆ ನನ್ನ ಮರಣದಿಂದ ನೀನೇನೂ ವ್ಯಥೆಪಡಬೇಡಮ್ಮಾ. ನಿನ್ನ ಸುಖವನ್ನು ನೋಡಿ ಸಾಯುತ್ತಿರುವ ನನಗೆ ಅನಂತವಾದ ತೃಪ್ತಿಯುಂಟಾಗಿದೆ." ಎಂದರು. ತಂದೆಯ ಮಾತುಗಳನ್ನು ಕೇಳುತ್ತಿದ್ದ ಹಾಗೆಯೇ ಲಲಿತೆಯು ಎಳೆಯ ಮಗುವಿನಂತೆ ರೋಧಿಸುತ್ತಾ, "ಅಣ್ಣಾ, ಹೀಗೇಕೆ ನಿಮ್ಮ ಮರಣದ ಸುದ್ದಿ ಯನ್ನೆತ್ತಿ ನನ್ನ ಹೃದಯವನ್ನಿರಿಯುತ್ತೀರಿ? ಹೀಗೇಕೆ ನೀವು ಸಂಕಟಪಡುತ್ತಿದ್ದೀರಿ? ಇಂದಿಗೆ ಎರಡು ತಿಂಗಳಿಂದಲೂ ನಿಮ್ಮನ್ನು ಏನೋ ಒಂದು ಚಿಂತೆಯು ಬಾಧಿಸುತ್ತಿದೆ. ಆದನ್ನು

ನನಗೆ ತಿಳಿಸದೆ ಬಚ್ಚಿಟ್ಟುಕೊಂಡು ನೀವೊಬ್ಬರೇ ಅನುಭವಿಸಿ ನವೆದುಹೋಗುತ್ತಿದ್ದೀರಿ. ನೀವು ಹೋದರೆ ನಾನು ಬದುಕುವುದು ಹೇಗಣ್ಣಾ?" ಎಂದಳು. ಮಗಳ ಮಾತನ್ನು ಕೇಳಿ ಮಾತಾಡಲಾರದ ಪ್ರಯಾಸದಿಂದ ಶ್ಯಾಮಯ್ಯನವರು ಕೊನೆಗೆ ಇಷ್ಟು ಹೇಳಿದರು: "ಕಂದಾ, ನಿನ್ನ ತಂದೆಯನ್ನು ಬದುಕಿಸಬೇಕೆಂಬ ಆಸೆಯಿದ್ದರೆ ನನ್ನ ಒಂದು ಮಾತನ್ನು ನೀನು ಉಳಿಸಬೇಕಮ್ಮಾ."

"ಏನಣ್ಣಾ ಅದು? ಒಂದಲ್ಲ, ನಿಮ್ಮ ಯಾವ ಮಾತನ್ನು ತಾನೆ ನಾನು ದಾಟಿದ್ದೇನಣ್ಣಾ?"

"ಆದರೆ ಇಂದು ನಾನು ಹೇಳುವ ಮಾತು ನಿನಗೆ ಬಹಳ ಸಂಕಟವನ್ನುಂಟುಮಾಡುವುದಮ್ಮಾ."

ತಂದೆಯ ಪ್ರಾಣವನ್ನುಳಿಸಿಕೊಳ್ಳಬೇಕೆಂಬ ಪಿತೃಪ್ರೇಮವು ಲಲಿತೆಯ ಹೃದಯವನ್ನು ತುಂಬಿ ತುಳುಕಿತು. ಬೇರಾವ ಯೋಚನೆಯೂ ಅವಳ ಮನಸ್ಸಿಗೆ ಆ ಸಮಯದಲ್ಲಿ ಹೊಳೆಯುವಂತಿರಲಿಲ್ಲ.

"ಅಣ್ಣಾ, ಈ ಪ್ರಾಣವನ್ನಾದರೂ ಒಪ್ಪಿಸಿ ನಿಮ್ಮನ್ನು ಬದುಕಿಸಿಕೊಳ್ಳುತ್ತೇನೆ. ಶ್ರೀರಾಮಚಂದ್ರನಾಣೆಗೂ ನಿಮ್ಮ ಮಾತನ್ನು ನಡೆಸುತ್ತೇನೆ, ನಿಮ್ಮ ಸಂಕಟವೇನು ಹೇಳಣ್ಣಾ. ಮಗಳಲ್ಲಿ ನಿಮಗಿಷ್ಟು ಅಪನಂಬಿಕೆಯೇಕಣ್ಣಾ? ನಾನು ಅಂಥಾ ನೀಚಳೇನಣ್ಣಾ?"

ಅಳುತ್ತಿದ್ದ ಮಗಳನ್ನು ಶ್ಯಾಮಯ್ಯನವರು ಅತ್ಯಂತ ಅಕ್ಕರೆಯಿಂದ ತಮ್ಮ ಎದೆಗಪ್ಪಿಕೊಂಡು ಅವಳ ಕುರುಳನ್ನು ನೇವರಿಸುತ್ತಾ, "ಅಮ್ಮಾ, ನೀನು ಓದಿದವಳು. ತಿಳಿದವಳು.

ನಿನ್ನ ಪಿತೃವಾಕ್ಯವನ್ನು ಶಿರಸಾವಹಿಸುತ್ತೀಯೆಂಬುದನ್ನು ನಾನು ಬಲ್ಲೆನು. ಆದರೆ ನನ್ನ ಮಾತಿನಿಂದ ನೀನು ದುಃಖಿಸ ಬೇಡ. ನನ್ನ ಮೇಲೆ ಮುನಿಯಬೇಡ. ನಿನ್ನ ಮುದಿ ತಂದೆ ಯನ್ನು ಶಪಿಸಬೇಡ. ಎಲ್ಲವನ್ನೂ ಆದರ್ಶಪುತ್ರಿಯಂತೆ ಸಹಿಸಿ ಕೊಂಡು ಈ ನಿನ್ನ ದೀನನಾದ ತಂದೆಯ ಆತ್ಮದ ಆಕಾಂಕ್ಷೆ ಯನ್ನು ನೆರವೇರಿಸಮ್ಮಾ. ನೀನು ನನ್ನ ಏಕಮಾತ್ರ ಸೋದ ರಳಿಯನೂ ದಿಕ್ಕಿಲ್ಲದ ಪರದೇಶಿಯೂ ಆದ ಜಯರಾಮು ವನ್ನು ಮದುವೆಯಾಗಿ ಅವನ ಮನೆಯನ್ನು ಬೆಳಸಿ ನಮ್ಮ ವಂಶವನ್ನುದ್ಧಾರಮಾಡಮ್ಮಾ-ಇದೇ ಈ ನಿನ್ನ ತಂದೆಯು ನಿನ್ನಲ್ಲಿ ಮಾಡಿಕೊಳ್ಳುತ್ತಿರುವ ಪ್ರಾರ್ಥನೆ-" ಎಂದರು.

ತಂದೆಯ ನುಡಿಗಳು ಕೊನೆಮುಟ್ಟುವುದರೊಳಗೆ ಲಲಿ ತೆಯು ಸಿಡಿಲುಬಡಿದವಳಂತೆ "ಅಣ್ಣಾ!!" ಎಂದು ಚೀರಿ ದಳು. ಏನಾಯಿತೆಂದು ನೋಡುವಷ್ಟರಲ್ಲಿ ತಂದೆಯ ಬಾಹು ಪಾಶದಲ್ಲಿ ಲಲಿತೆಯು ಮೂರ್ಛೆಹೋಗಿದ್ದಳು!

ಮಾರನೆಯ ಮಧ್ಯಾಹ್ನದವರೆಗೂ ಲಲಿತೆಯು ಹೊರಗೆ ಹೊರಡಲಿಲ್ಲ. ಒಳಗೇ ಕುಳಿತು ತನ್ನ ಪಿತೃವಿಗೆ ತಾನು ಕೊಟ್ಟ ವಚನವನ್ನು ನೆನೆಯುತ್ತಾ ತನ್ನ ದುಃಖವನ್ನು ತಡೆದು ಕೊಳ್ಳಲಾರದೆ ನೀರವವಾಗಿ ಅಳುತ್ತಾ ನವೆಯುತ್ತಿದ್ದಳು. ತಾನೂ ಬಂದು ಊಟಮಾಡದೆ ತನ್ನ ತಂದೆಯವರಿಗೂ ಊಟ ತೆಗೆದುಕೊಂಡು ಹೋಗದೆ ಇದ್ದ ಲಲಿತೆಯನ್ನು ನೆನೆದು ಗೌರಮ್ಮನವರಿಗೆ ಅನುಮಾನವಾಯಿತು. ಶ್ಯಾಮಯ್ಯನವರ ರೀತಿಯೂ ಬಹಳ ವಿಚಿತ್ರವಾಗಿದ್ದುದರಿಂದ ಗೌರಮ್ಮನವರ ಅನುಮಾನವು ಪ್ರಬಲವಾಗತೊಡಗಿತು. ಕೊನೆಗೆ ಹನ್ನೆರಡು ಗಂಟೆ ಸುಮಾರಿಗೆ ಲಲಿತೆಯನ್ನು ಕರೆತರಲು ತಾವೇ

ಶ್ಯಾಮಯ್ಯನವರ ಮನೆಯೊಳಕ್ಕೆ ಹೋದರು. ಶ್ಯಾಮಯ್ಯನವರು ದಿಂಬೊರಗಿ ಯೋಚನಾಮಗ್ನರಾಗಿದ್ದವರು ಗೌರಮ್ಮನವರನ್ನು ಕಂಡಾಕ್ಷಣ "ಬಾ ಅಮ್ಮಾ, ಬಾ ತಾಯೀ ಕುಳಿತುಕೋ." ಎಂದು ಎಂದೂ ಇಲ್ಲದ ದೈನ್ಯತೆಯಿಂದಲೂ ಪ್ರೀತ್ಯಾದರಗಳಿಂದಲೂ ಸುಸ್ವಾಗತವನ್ನಿತ್ತರು. ಗೌರಮ್ಮನವರು ಕುಳಿತ ಮೇಲೆ "ತಾಯೀ, ಗೌರಮ್ಮಾ, ಈ ಹನ್ನೊಂದು ವರ್ಷಗಳೂ ನನ್ನ ಭಾಗದ ದೇವರಾಗಿ ಈ ಬಡವನನ್ನು ಕಾಪಾಡಿದಿರಿ. ನನ್ನ ಲಲಿತೆಯನ್ನು ನನ್ನ ಮಗಳಲ್ಲ, ನಿಮ್ಮ ಮಗಳೆಂದು ನೀವು ಸಾಕಿ ಇಷ್ಟು ದೊಡ್ಡವಳನ್ನಾಗಿ ಮಾಡಿದಿರಿ," ಎಂದು ಮಾತನ್ನು ಪ್ರಾರಂಭಿಸಿದರು. ಅವರ ಕಂಠದಲ್ಲಿ ಗದ್ಗದವಿತ್ತು. ಅವರ ಕಣ್ಣಲ್ಲಿ ಅನಂತ ಕೃತಜ್ಞತೆಯ ಕಣ್ಣೀರಿತ್ತು. ಅವರ ಸ್ವರದಲ್ಲಿ ದೈನ್ಯತೆಯ ಪರಮಾವಧಿಯಿತ್ತು. ಅವರ ನುಡಿಯಲ್ಲಿ ಅಖಂಡ ವಿಶ್ವಾಸದ ಮಾಧುರ್ಯವಿತ್ತು. ಶ್ಯಾಮಯ್ಯನವರ ಮಾತಿನ ರೀತಿಯನ್ನು ನೋಡಿ ಗೌರಮ್ಮನವರು ಕರುಣೆಯಿಂದ ಕರಗಿಹೋದರು. ತಮ್ಮ ಮುಂದೆ ಹಿರಿಯರಾದ ಅವರು ಇಷ್ಟು ದೀನಸ್ವರದಿಂದ ಮಾತಾಡುವುದನ್ನು ಕೇಳಿ ಸಂಕಟದಿಂದ ಮರುಗಿದರು. ಶ್ಯಾಮಯ್ಯನವರು ಇದೇ ಸುಸಮಯವೆಂದು ಅರಿತುಕೊಂಡು ತಮಗೆ ಬಂದಿರುವ ಧರ್ಮಸಂಕಟವನ್ನೆಲ್ಲಾ ಗೌರಮ್ಮನವರ ಮುಂದೆ ತೋಡಿಕೊಂಡುಬಿಟ್ಟರು. ಅವರ ಮಾತು ಪೂರೈಸುವ ಹೊತ್ತಿಗೆ ಗೌರಮ್ಮನವರಿಗೂ ಚಿಂತೆ ಮುಸುಗಿತು. ಹಿಂದಿನ ರಾತ್ರಿ ಲಲಿತೆಯಿಂದ ಶ್ಯಾಮಯ್ಯನವರು ಶ್ರೀರಾಮನಾಣೆಯಾಗಿ ತೆಗೆದುಕೊಂಡ ಭಾಷೆಯನ್ನೂ ಶ್ಯಾಮಯ್ಯನವರು ಧ್ವನಿಪೂರ್ವಕವಾಗಿ ತಿಳಿಸಿದ ಮೇಲಂತೂ ಗೌರಮ್ಮನವರಿಗೆ

ಕತ್ತಲು ಕವಿದಂತಾಯಿತು. ಒಳಮನೆಯಲ್ಲಿ ಲಲಿತೆಯ ರೋದನವು ಕೇಳಿಬರುತ್ತಿತ್ತು. ಆದರೆ ಧರ್ಮಪಾರಾಯಣೆಯೂ ಮಹಾಸಂಯಮಸಂಪನ್ನಳೂ ಆದ ಗೌರಮ್ಮನವರಿಗೆ ಶ್ಯಾಮಯ್ಯನವರ ವಿಷಯದಲ್ಲಿ ಕೋಪವುಂಟಾಗಲಿಲ್ಲ. ದ್ವೇಷವುಂಟಾಗಲಿಲ್ಲ. ಅಸಹನೆಯುಂಟಾಗಲಿಲ್ಲ. ಅನುಕಂಪವೊಂದರಿಂದ ಕರಗಿದರು. ದಯೆಯಿಂದ ಮರುಗಿದರು. ಒದಗಿರುವ ಸಮಸ್ಯೆಯ ಸೂಕ್ಷ್ಮತೆಯೂ ಗಾಢತೆಯೂ ಮತ್ತು ಅದರ ಅನಿವಾರ್ಯತೆಯೂ ಅನುಭವಗಳಿಂದ ಹಣ್ಣಾದ ಅವರ ಹೃದಯಕ್ಕೆ ವೇದ್ಯವಾದುವು. ಶ್ಯಾಮಯ್ಯನವರ ಮಾತೆಲ್ಲವೂ ಅವರಿಗೆ ನ್ಯಾಯವಾಗಿ, ಧರ್ಮವಾಗಿ ಕಂಡಿತು. ಅದಕ್ಕೆ ಪ್ರತಿಯಾಡುವುದರಿಂದ ಶ್ಯಾಮಯ್ಯನವರಿಗೆ ಆಜನ್ಮದುಃಖವನ್ನುಂಟುಮಾಡಿದಂತಾಗುತ್ತದೆಂದು ಅವರ ಒಳದನಿಯು ಮಿಡಿದಂತಾಯಿತು. “ನಮ್ಮ ಆಶ್ರಯದಲ್ಲಿ ಇಷ್ಟು ದಿನಗಳು ಇದ್ದುದಕ್ಕಾಗಿ ಶ್ಯಾಮಣ್ಣಯ್ಯನವರು ನಮ್ಮ ಇಷ್ಟದಂತೆಯೇ ನಡೆಯಬೇಕೆಂಬ ಅಭಿಲಾಷೆ ಯಾವ ಧರ್ಮ? ಛೇ, ಅದಕ್ಕಿಂತ ಅನ್ಯಾಯವಿಲ್ಲ. ನಾವೇನು ಕೊಟ್ಟಿದ್ದರೂ ಇನ್ನೊಬ್ಬರ ಆತ್ಮಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದಕ್ಕಿಂತ ಧರ್ಮಬಾಹಿರವಾದ ಕೆಲಸವಿನ್ನುಂಟೇ? ಅಲ್ಲದೆ ಶ್ಯಾಮಣ್ಣಯ್ಯನವರು ನಮಗೆ ಮಾಡಿರುವ ಸಹಾಯಸೇವೆಗಳನ್ನು ಲೆಕ್ಕ ಹಾಕುವುದಕ್ಕಾದೀತೆ? ಅವರು ಬರದೇ ಹೋಗಿದ್ದರೆ ನಮ್ಮ ಚಂದ್ರಣ್ಣ ಹೈಸ್ಕೂಲನ್ನಾದರೂ ನೋಡುತ್ತಿದ್ದನೇ? ಶ್ಯಾಮಣ್ಣಯ್ಯನವರಿಂದಲ್ಲವೇ ನನ್ನ ಮಗನಿಗೆ ಅನಂತಪುರದಲ್ಲಿರುವ ಮಹಾಋಷಿಗಳಂಥ ಆ ಗುರುದೇವನು ದೊರಕಿದುದು? ಆ ಗುರು ಮಾತಾಪಿತೃಗಳಿಗೆ ನನ್ನ ಮಗನ ಮೇಲೆ ಅದೆಷ್ಟು

ಪ್ರೀತಿಯೋ? ಅದೆಷ್ಟು ಅಭಿಮಾನವೋ? ಇನ್ನೊಂದು ತಿಂಗಳಾದ ಮೇಲೆ ದಂಪತಿಗಳಿಬ್ಬರೂ ನಮ್ಮ ಈ ಹಳ್ಳಿಗೆ ಅದರಲ್ಲೂ ನಮ್ಮನ್ನು ನೋಡಿಕೊಂಡು ಹೋಗುವುದಕ್ಕೆ ಬರುತ್ತೇವೆಂದು ಕಾಗದ ಬರೆದಿದ್ದಾರೆ! ಇದೆಲ್ಲಾ ಶ್ಯಾಮಣ್ಣ ಯ್ಯನವರ ಕೃಪೆಯಲ್ಲವೇ? ಅವರಿಲ್ಲದಿದ್ದರೆ ನಮ್ಮ ಚಂದ್ರಣ್ಣನು ಈ ಹೊತ್ತು ಈ ಹಳ್ಳಿಗಾಡಿಗೇ ಇಷ್ಟು ದೊಡ್ಡ ಗೌರವವನ್ನು ಸಂಪಾದಿಸುತ್ತಿದ್ದನೆ? ಇಷ್ಟೇ ಅಲ್ಲದೆ ಶ್ಯಾಮಣ್ಣಯ್ಯನವರು ಈ ಹನ್ನೊಂದು ವರ್ಷಗಳೂ ನಮ್ಮ ಮನೆಯ ಸಾವಿರಾರು ಲೇವಾದೇವಿಗಳನ್ನೆಲ್ಲಾ ನೋಡಿಕೊಂಡು ನಡೆಸಿಕೊಂಡು ಬಂದಿದ್ದಾರಲ್ಲವೆ? ಅವರಿಲ್ಲದಿದ್ದರೆ ವಿಧವೆಯಾದ ನಾನೂ ಹೆಣ್ಣು ಹೆಂಗಸು ನಿರಕ್ಷರಸ್ಥನಾದ ನಮ್ಮ ಚಿನ್ನಯ್ಯ ಈ ನಮ್ಮಿಬ್ಬರಿಂದ ನಮ್ಮ ಮನೆಯ ವಹಿವಾಟನ್ನು ಇಷ್ಟು ಸುಲಲಿತವಾಗಿ ನಡೆಸಿಕೊಂಡು ಬರುವುದಕ್ಕಾಗುತ್ತಿತ್ತೇ? ಇನ್ನು ಈ ಊರಿಗೆ ಶ್ಯಾಮಣ್ಣಯ್ಯನವರು ಮಾಡಿರುವ ಸೇವೆಯನ್ನು ಯಾರು ತಾನೆ ಬೆಲೆಕಟ್ಟಲು ಸಾಧ್ಯ? ಅಕ್ಷರ ಅರಿಯದ ಮಕ್ಕಳು ಕಲ್ಯಾಣದುರ್ಗದವರೆಗೂ ಹೋಗಿ ಬಂದರು. ದೊಡ್ಡವರಾದವರನೇಕರು ಓದುಬರಹ ಕಲಿತರು. ಈ ಊರಿನ ಮುಂದಿನ ಪೀಳಿಗೆಗೆ ಕಣ್ಣಾಗಲೆಂದು ಶ್ಯಾಮಯ್ಯನವರು ಆ ಶಾರದಾದೇವಿಯನ್ನೇ ಇಲ್ಲಿಗೆ ಕರೆದು ತಂದು ಬಿಟ್ಟರು! ಸರ್ಕಾರಿ ಪಾಠಶಾಲೆಯನ್ನು ತಮ್ಮ ಶ್ರಮ ಮುಂದಾಳುತನಗಳಿಂದಲೇ ನಿರ್ಮಿಸಿದರು. ಕತ್ತಲ ಕೊಂಪೆಯಾಗಿದ್ದ ಈ ಊರಲ್ಲಿ ವಿದ್ಯೆಯ ನಂದಾದೀಪವನ್ನು ಹಚ್ಚಿದರು! ಇನ್ನು ಶ್ಯಾಮಣ್ಣಯ್ಯನವರು ಈ ಊರು ಬಿಟ್ಟು ಹೋದಮೇಲೆ ಈ ಕೀರ್ತಿಯೆಲ್ಲಾ ಯಾರಿಗೆ? ಅವರಿಗೆ

ಆಶ್ರಯಕೊಟ್ಟು ಸ್ವಂತ ಮನೆಯವರಂತೆ ನೋಡಿಕೊಳ್ಳು ತ್ತಿರುವ ನಮಗಿಲ್ಲವೇ? ಆಹಾ! ಶ್ಯಾಮಣ್ಣಯ್ಯನವರು ನಮಗೇನು ಕೊಟ್ಟಿಲ್ಲ? ಏನು ಕೊಡದೆ ಇಲ್ಲ? ನಾವು ಕೊಟ್ಟಿರುವುದನ್ನು ಲೆಕ್ಕ ಹಾಕಬಹುದು. ಅವರು ನಮಗೆ ಬಿಟ್ಟು ಹೋಗುವುದನ್ನು ಬೆಲೆ ಕಟ್ಟಲು ಸಾಧ್ಯವೇ? ನನ್ನ ಪತಿದೇವನು ಸ್ವರ್ಗಸ್ಥನಾಗುವಾಗ ನನಗೆ ಹೇಳಿದುದೇನು? ಆ ವಿದ್ಯಾಶಾರದೆಯನ್ನು ಸೇವಿಸು ಎಂದಲ್ಲವೆ? ಶ್ಯಾಮಣ್ಣ ಯ್ಯನವರ ಈ ಹನ್ನೊಂದು ವರ್ಷಗಳ ತಪಸ್ಸಿಲ್ಲದೆ ಹೋಗಿದ್ದರೆ ಆ ನನ್ನ ಪತಿದೇವನ ಹೆಬ್ಬಯಕೆ ಈಡೇರುತ್ತಿತ್ತೇ? ಇಂತಹ ಸತ್ಪುರುಷರಿಗೆ ಬಂದಿರುವ ಧರ್ಮಸಂಕಟದಲ್ಲಿ ನಾವು ಅವರನ್ನು ನೋಯಿಸಿದರೆ ದೇವರು ನಮಗೆ ಶ್ರೇಯಸ್ಸನ್ನುಂಟು ಮಾಡುವುದಿಲ್ಲ.'' ಪತಿಪರಾಯಣಳೂ ಧರ್ಮಾತ್ಮಳೂ ಆದ ಗೌರಮ್ಮನವರ ಕಣ್ಣುಗಳಲ್ಲಿ ನೀರು ತುಂಬಿತು. ಅನಂತವಾದ ಕೃತಜ್ಞತಾಭಾವದಿಂದ ಅವರು ಮನದಲ್ಲಿಯೇ ಶ್ಯಾಮಯ್ಯ ನವರಿಗೆ ಮಣಿದರು. ಮತ್ತೆ ಅವರ ಆಲೋಚನಾಪಥ ಮುಂದೆ ಸಾಗಿತು. "ದೇವರು ನಡೆಸಿದಂತಾಗಲಿ. ನನ್ನ ಮಗನಿಗೆ ಹೆಣ್ಣನ್ನು ಎಲ್ಲಿಯಾದರೂ ತರಬಹುದು.............. ಇಷ್ಟಕ್ಕಾಗಿ ಏಕೆ ಚಿಂತಿಸಬೇಕು? ಎಲ್ಲಾ ರೀತಿಯಿಂದಲೂ ಲಲಿತೆಯನ್ನು ಮದುವೆಯಾಗುವ ಅಧಿಕಾರ ಜಯರಾಮುವಿಗೇ ಸೇರಿದ್ದು. ಈ ವಿಷಯದಲ್ಲಿ ಅಡ್ಡಿಯಾಗಲು ತಾವಾರು? ಅಡ್ಡಿಯಾದರೆ ಲೋಕವು ತಾನೆ ಏನೆಂದೀತು? ಛೇ, ಛೇ, ಇಂತಹ ವಂಶೋದ್ಧಾರಕವಾದ ಕಾರ್ಯಕ್ಕೆ ನಾವು ಅಡ್ಡಿ ಹೋಗಬಾರದು. ಲಲಿತೆಯು ತನ್ನ ತಂದೆಯ ಸ್ವಂತ ಸೋದರಳಿಯನನ್ನು ಮದುವೆಯಾಗುವುದರಿಂದ ಶ್ಯಾಮ

ಣ್ಣಯ್ಯನವರಿಗೆ ಎಷ್ಟು ಸಂತೋಷ! ಎಷ್ಟು ತೃಪ್ತಿ! ನಮಗೂ ಎಂತಹ ಕೀರ್ತಿ!'' ಎಂದುಕೊಂಡರು. ಈ ರೀತಿ ಆಲೋಚಿಸಿದಾಗ ಗೌರಮ್ಮನವರಿಗೆ ಬಂದ ಕಣ್ಣೀರು ಆನಂದಾಶ್ರುಗಳಾಗಿದ್ದುವು. ಆ ಕಣ್ಣೀರಲ್ಲಿ ಸುಖವಿತ್ತು. ತ್ಯಾಗವಿತ್ತು. ಅನಂತವಾದ ತೃಪ್ತಿಯಿತ್ತು. ತನ್ನ ಹೊಟ್ಟೆಯ ಮಗಳನ್ನೇ ಜಯರಾಮುವಿಗೆ ಸಂತೋಷವಾಗಿ ಕೈನೀರೆರೆದು ಕೊಡುವಂಥಾ ಮಾತೃಹೃದಯದ ಹರ್ಷಾನಂದವಿತ್ತು. ಆದರೆ ಯಾವುದನ್ನೂ ತಾವು ಬಾಯಿಬಿಟ್ಟು ಆಡಿದರೆ ಒಳಗೆ ಲಲಿತೆಗೆ ನೋವಾಗಬಹುದೆಂದೂ ಲಲಿತೆಗೆ ತಾವೇ ಒಂಟಿಯಾಗಿ ಸಮಾಧಾನಪಡಿಸಬೇಕೆಂದೂ ಆಲೋಚಿಸಿ ಮೇಲೆದ್ದರು. ಅವರ ಮುಖದ ಹರ್ಷತೃಪ್ತಿಯನ್ನು ಕಂಡ ಸ್ವಾಮಯ್ಯನವರಿಗೆ ಆನಂದವುಂಟಾಗಿತ್ತು. ಅವರೂ ಗೌರಮ್ಮನವರ ದೊಡ್ಡತನಕ್ಕೆ ಆಶ್ಚರ್ಯಾನಂದಗಳಲ್ಲಿ ಮುಳುಗಿಹೋದರು. ನಂತರ ಗೌರಮ್ಮನವರು ಲಲಿತೆಯನ್ನು ಊಟಕ್ಕೆ ಕರೆದೊಯ್ಯಲು ಒಳಮನೆಗೆ ಲಲಿತೆಯ ಸಮೀಪಕ್ಕೆ ಹೋದರು. ಲಲಿತೆಯು ಗೌರಮ್ಮನವರನ್ನು ಕಂಡಾಕ್ಷಣವೇ ಕರುಳಿರಿಯುವಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಆ ತನ್ನ ಕಂದನು ಒಂದೇ ರಾತ್ರಿಯಲ್ಲಿ ಎಷ್ಟು ಸವೆದು ಹೋಗಿದ್ದಾಳೆಂಬುದನ್ನು ನೋಡಿದ ಗೌರಮ್ಮನವರಿಗೆ ಬಂದ ಶೋಕವನ್ನು ತಡೆಯುವವರಾರು? "ನನ್ನ ಕಂದಾ, ದೇವರು ಇದೇನು ಮಾಡಿದನಮ್ಮಾ ನಿನಗೆ?'' ಎಂದು ಭಾವಿಸುತ್ತಿದ್ದಂತೆಯೇ ಲಲಿತೆಯು ತನ್ನ ನಿಶ್ಶಕ್ತಿಯನ್ನು ಲೆಕ್ಕಿಸದೆ ಚಿಮ್ಮಿ ಎದ್ದು ಬೀಳುವವಳಂತೆ ಬಂದು ಗೌರಮ್ಮನವರ ಮುನ್ನೀಡಿದ ತೋಳುಗಳ ತೆಕ್ಕೆಯಲ್ಲಿ ಒಂದಾದಳು.

ದಾರುಣವಾದ ಶೋಕಭಾರದಿಂದ ಇಬ್ಬರೂ ನೆಲಕ್ಕೆ ಕುಸಿದರು. ಆ ತಾಯಿಮಕ್ಕಳ ಶೋಚನೀಯವಾದ ಕರುಳ ಸಂಕಟವನ್ನು ಹೇಗೆ ಚಿತ್ರಿಸಲಿ?



## ಎಂಟನೆಯ ದಳ

### ತ್ಯಾಗ

ನಿಯತಿಯನಾರ್ ಮೀರಿದಪರ್ ? ।
ಭಯಮೇವುದೊ ? ಮುಟ್ಟಿದೆಡೆಗೆ ಸೈರಿಸುವುದೆ. ಕೇಳ್ ॥
ನಯವಿದೆ, ಪೆತ್ತ ಪರೀಷಹ ।
ಜಯಮೆ ತಪಂ. ತಪಕೆ ಬೇರೆ ಕೋಡೆರಡೊಳವೇ ? ॥

—ಜನ್ನ

ಔದಾರ್ಯ ತಾಯಿ ನೀತಿಗೆ, ಧೈರ್ಯವೇ ತಂದೆ ।
ಸ್ವಾಧಿಪತ್ಯದೆ ನೀನು ಬಾಳನಾಳುವೊಡೆ ॥
ಹೋದುದನು ನೆನೆಯದಿರು, ಬರುವುದಕೆ ಸಿದ್ಧನಿರು ।
ಆದನಿತು ಸಂತೋಷ—ಮಂಕುತಿಮ್ಮ ॥

— ಡಿ.ವಿ.ಜಿ.

ಜಯರಾಮುವು ಶ್ಯಾಮಯ್ಯ ಲಲಿತೆಯರನ್ನು ಕರೆದು ಕೊಂಡುಹೋಗಲು ಬರಬೇಕಾಗಿದ್ದ ದಿನವು ಸಮೀಪಿಸು ತ್ತಿತ್ತು. ರಾತ್ರಿ ಎಲ್ಲರ ಊಟವೂ ಪೂರೈಸಿದೆ. ಚಂದ್ರಯ್ಯನು ತನ್ನ ವ್ಯಾಸಂಗದ ಕೋಣೆಗೆ ಮಲಗುವುದಕ್ಕೆ ಹೋಗಿದ್ದಾನೆ. ಒಳಮನೆಯ ಕೋಣೆಯಲ್ಲಿ ಗಂಗಮ್ಮ ಶಾರದೆಯರು ಮಲಗಿ ನಿದ್ದೆಹೋಗಿದ್ದಾರೆ. ಶ್ಯಾಮಯ್ಯ ಲಲಿತೆಯರೂ ತಮ್ಮ ಮನೆಯಲ್ಲಿ ಆಗಲೇ ಮಲಗಿದ್ದಾರೆ. ತಮ್ಮ ಇಷ್ಟಾರ್ಥವನ್ನು ದೇವರು ನೆರವೇರಿಸಿದುದರಿಂದ ಕೃತಜ್ಞತೆಯ ಸಂತೋಷದಲ್ಲಿ ಮುಳುಗಿದ್ದ ಶ್ಯಾಮಯ್ಯನವರು ದಿನೇದಿನೇ ಆರೋಗ್ಯಮುಖಿ ರಾಗುತ್ತಿದ್ದುದರಿಂದ ಅವರಿಗೆ ನಿದ್ರೆಯು ಚೆನ್ನಾಗಿಯೇ ಬಂದಿತ್ತು. ಲಲಿತೆಯು ಮಾತ್ರ ತಂದೆಯ ಪಕ್ಕದಲ್ಲಿ

ಹೊರಳಾಡುತ್ತಾ ನಿದ್ರೆಯಿಲ್ಲದೆ ಚಿಂತಾಗ್ನಿಗೆ ಆಹುತಿಯಾಗು ತ್ತಿದ್ದಾಳೆ. ಅವಳದಿಂಬು ಕಣ್ಣೀರಿನಲ್ಲಿ ತೊಯ್ದು ಹೋಗುತ್ತಿದೆ. ಗೌರಮ್ಮನವರ ಮನೆಯ ಒಳಗಡೆ ಪಡಸಾಲೆಯಲ್ಲಿ ಗೌರಮ್ಮ ಚಿನ್ನಯ್ಯ ಇಬ್ಬರೇ ದೀಪದ ಬೆಳಕಿನಲ್ಲಿ ಸಣ್ಣ ದನಿಯಲ್ಲಿ ಮಾತಾಡುತ್ತಿದ್ದಾರೆ.

ಗೌರಮ್ಮ : "ಚಿನ್ನಣ್ಣಾ, ಹೋಗಿದ್ದೆಯಾ ಚಂದ್ರಣ್ಣನ ಹಿಂದೆ?" ಚಿನ್ನಯ್ಯನು ಗೌರಮ್ಮನವರಿಗಿಂತ ಒಂದೆರಡು ವರುಷಗಳಿಗೆ ಮಾತ್ರ ಚಿಕ್ಕವನು. ಆದರೂ ಅತ್ತಿಗೆಯ ಮುಂದೆ ತಲೆಯೆತ್ತಿ ಎಂದೂ ಮಾತಾಡಿದವನಲ್ಲ. ಭಕ್ತಿ ವಿನಯಗಳಿಂದ ನಸುತಲೆಬಾಗಿಸಿ ನೆಲವನ್ನು ನೋಡುತ್ತಾ ಉತ್ತರ ಕೊಡುತ್ತಿದ್ದನು.

ಚಿನ್ನಯ್ಯ : "ಹೋಗಿದ್ದೆ ಅತ್ತಿಗೆ. ಬೆಳಗ್ಗೆ ತೋಟಕ್ಕೆ ಕಪಿಲೆ ಹೂಡುವಂತೆ ಆಳುಗಳಿಗೆ ಹೇಳಿ ಹೋದೆ. ಸಂಜೆ ಗಂಗುವನ್ನೂ ಶಾರದನನ್ನೂ ಮನೆಯಕಡೆ ಕಳಿಸಿಕೊಟ್ಟು ಹೋದೆ. ನಮ್ಮ ಚಂದ್ರಣ್ಣ ಇನ್ನೆಲ್ಲಿಗೂ ಹೋಗುವುದಿಲ್ಲ ಅತ್ತಿಗೆ. ಬೆಳಗ್ಗೆ ಸಂಜೆ ಎರಡುಹೊತ್ತೂ ಆ ಶಂಭುಗಿರಿ ಬೆಟ್ಟಕ್ಕೆ ಹೋಗುತ್ತಾನೆ. ಅದರ ಮೇಲಿರುವ ಕಲ್ಯಾಣೇಶ್ವರನ ಗುಡಿಯ ಹೊರಾಂಗಣದ ಕಲ್ಲುಕಂಭಕ್ಕೆ ಒರಗಿ ಒಬ್ಬನೇ ಕುಳಿತುಕೊಳ್ಳುತ್ತಾನೆ. ಗಂಟೆಗಟ್ಟಲೆ ಕಣ್ಣು ಮುಚ್ಚಿಕೊಂಡು ಏನೇನೋ ತನ್ನ ತುಟಿಗಳಲ್ಲಿಯೇ ಹೇಳಿ ಕೊಳ್ಳುತ್ತಾನೆ. ಒಮ್ಮೊಮ್ಮೆ ಕಣ್ಣೀರು ಹಾಕುತ್ತಾನೆ. ಮತ್ತೊಮ್ಮೆ ಗಂಭೀರನಾಗುತ್ತಾನೆ. ಇನ್ನೊಂದು ಸಾರಿ ಸುತ್ತಲೂ ಕೆಳಗೆ ಭೂಮಿಯ ಮೇಲೆ ಕಾಣುವ ಮರ ಗಿಡ ಕೊಳ ಬಯಲು ಬೆಟ್ಟಗಳನ್ನು ನೋಡುತ್ತಾ ತುಟಿಯಲ್ಲಿಯೇ

ನಗುತ್ತಾನೆ. ಆ ನಗುವಿನಲ್ಲಿ ಅಳುವೂ ಇದ್ದಂತೆ ಕಾಣುತ್ತದೆ. ಬಹಳ ಬಡವಾಗಿದ್ದಾನೆ ಅತ್ತಿಗೆ. ರಜಾಕ್ಕೆ ಬಂದಾಗ ಇದ್ದದ್ದರಲ್ಲಿ ಕಾಲುಭಾಗ ಇಳಿದುಹೋಗಿದ್ದಾನೆ. ಈಕಡೆ ಲಲಿತಮ್ಮ ದುಃಖದಿಂದ ಮನೆ ಬಿಟ್ಟು ಹೊರಗೆ ಹೊರಡದೆ ಒಳಗೇ ಸವೆದುಹೋಗುತ್ತಿದ್ದಾಳೆ. ಅತ್ತಿಗೇ, ಏನಾದರೂ ಅವರ ಪ್ರೀತಿಯನ್ನು ಕಳೆಯೋದು ಚೆನ್ನಾಗಿ ಕಾಣಲ್ಲ ಅನ್ನಿಸುತ್ತೆ. ಶ್ಯಾಮಯ್ಯನವರಿಗೆ ಸರಿಯಾಗಿ ಹೇಳಿ ಲಲಿತಮ್ಮನನ್ನೇ ನಮ್ಮ ಚಂದ್ರಣ್ಣನಿಗೆ ಮಾಡಿಕೊಳ್ಳುವುದು ಒಳ್ಳೇದು ಅನ್ನಿಸುತ್ತೆ. ಶ್ಯಾಮಯ್ಯನೋರ ಅಳಿಯನಿಗೆ ಆ ಅನಂತಪುರದಲ್ಲಿಯೇ ಚನ್ನಾಗಿರೋ ಹೆಣ್ಣನ್ನು ಹುಡುಕಿ ನಾವೇ ಖರ್ಚಿಟ್ಟು ಎರಡು ಮದುವೇನೂ ನಾಳೆ ಜೇಷ್ಠಮಾಸಕ್ಕೆ ಸಾಗಿಸಿದರೆ ಬಹಳ ಚೆನ್ನಾಗಿರುತ್ತೆ. ಎರಡು ಮದುವೇನೂ ಇಲ್ಲೇ ನಡೀಲೇಕು. ಸುತ್ತಲ ಹಳ್ಳಿಯವರನ್ನೂ ಕರಸಿ ಅದ್ದೂರಿಯಾಗಿ ಅನ್ನ ಹಾಕಿಸಿದರಾಯಿತು. ಎಲ್ಲರೂ ಸಂತೋಷಪಟ್ಟು ಹೋಗುತ್ತಾರೆ. ಅದಕ್ಕೆ ಶ್ಯಾಮಯ್ಯನೋರನ್ನ ಕೇಳಿ ಒಪ್ಪಿಸತ್ತಿಗೆ."

ಗೌರಮ್ಮ. "ಛೇ, ಛೇ; ಅವರೂ ಇವರೂ ನಮ್ಮನ್ನು ಏನೆಂದಾರು ಚಿನ್ನಣ್ಣ? ನ್ಯಾಯ ಧರ್ಮಗಳಿಗೆ ವಿರುದ್ಧವಾಗಿ ಎಷ್ಟು ಹಣವನ್ನು ಖರ್ಚುಮಾಡಿದರೂ ಅದು ಊರ್ಜಿತವಾಗೊಲ್ಲ ಚಿನ್ನಣ್ಣಾ. ಮಗನ ಮೇಲಿನ ಪ್ರೀತಿಗಾಗಿ ನೀನು ಹೀಗೆ ಹೇಳುತ್ತಿದ್ದೀಯೆ. ಶ್ಯಾಮಣ್ಣಯ್ಯನವರು ತಾನೆ ಸ್ವಂತ ಅಕ್ಕನ ಮಗನಿಗೆ, ಅದರಲ್ಲೂ ಈಗ ತಂದೆತಾಯಿಯರಾರೂ ಇಲ್ಲದ ತಬ್ಬಲಿಗೆ ಮಗಳನ್ನು ಕೊಡುವುದನ್ನು ಬಿಟ್ಟು ಬೇರೆಯವರಿಗೆ ಹೇಗೆ ತಾನೆ ಕೊಟ್ಟಾರು? ಅಲ್ಲದೆ ಬಾಧ್ಯ

ಹೆಣ್ಣು ಇರುವಾಗ ಜಯರಾಮುವು ಬೇರೆ ಹೆಣ್ಣನ್ನು ಒಪ್ಪುತ್ತಾನೆಯೇ? ಅವನೂ ಲಲಿತಮ್ಮನಷ್ಟೇ ಓದಿದ್ದಾನಂತೆ. ಆಗಲೇ ಸರ್ಕಾರಿ ನೌಕರಿಯಲ್ಲಿ ಸೇರಿದ್ದಾನಂತೆ. ಅಂದ ಮೇಲೆ ಇಷ್ಟು ಚೆಲುವಾಗಿರುವ ತನ್ನ ಸೋದರಮಾವನ ಮಗಳನ್ನು ಕಡೆಯವರಾದ ನಮಗೆ ಬಿಟ್ಟುಕೊಡುತ್ತಾನೆಯೇ? ಅದೆಲ್ಲಾ ಆಗೋಮಾತಲ್ಲಪ್ಪಾ!........ಅಲ್ಲದೆ ಶ್ಯಾಮಣ್ಣಯ್ಯನವರು ಮಗಳಿಂದ ಶ್ರೀರಾಮನಾಣೆ ಇಡಿಸಿಕೊಂಡಿದ್ದಾರೆ! ಪಾಪ ಆ ಕಂದನನ್ನು ನಂಬಿಸಿ ಈರೀತಿ ತಮ್ಮ ಮಾತಿನಲ್ಲಿ ಕಟ್ಟಿಹಾಕಿದ್ದಾರೆ. ಈಗ ಅವರ ಮನಸ್ಸನ್ನು ದೇವರು ತಿರುಗಿಸಬೇಕೇ ಹೊರತು ಬೇರೇನೂ ಮಾಡುವಂತಿಲ್ಲ..... ... ನಮ್ಮನ್ನು ದೇವರು ಪರೀಕ್ಷೆ ಮಾಡುತ್ತಿದ್ದಾನೆಂದು ಕಾಣುತ್ತೆ! ನಾವು ತೀರ ಅಷ್ಟು ಮುಂದೆ ಬಿದ್ದು ಮಾತಾಡಿದೆವು ಎಂದರೆ ಲೋಕ ನಮ್ಮನ್ನು ಬಹಳವಾಗಿ ಆಡಿಕೊಳ್ಳುತ್ತೆ. ಅದರಲ್ಲೇನೂ ಅನುಮಾನವೇ ಇಲ್ಲ. ಏನಾದರೂ ಮಾಡಿ ನಮ್ಮ ಮಗುವನ್ನು ನಾವು ತಿದ್ದಿಕೊಳ್ಳಬೇಕು ಚಿನ್ನಣ್ಣಾ. ಇದರಲ್ಲಿ ಧರ್ಮಸೂಕ್ಷ್ಮ ಬಹಳ ಇದೆ. ಚಂದ್ರಣ್ಣನೇನು ದಡ್ಡನೇ? ಇದೆಲ್ಲಾ ಆತನಿಗೆ ಅರಿವಾಗದೆ ಇದೆಯೇ? ಎಲ್ಲದಕ್ಕೂ ದೇವರಿದ್ದಾನೆ. ನೀನು ಸುಮ್ಮನಿರು. ಈಗ ಏನು ಮಾತಾಡಿದರೂ ತಪ್ಪಾಗುತ್ತೆ."

ಚಿನ್ನಣ್ಣನು ತನ್ನ ಅತ್ತಿಗೆದೇವಿಯ ಮಾತನ್ನು ಕೇಳಿ ಧರ್ಮದೇವತೆಯ ಮುಂದೆ ಕುಳಿತ ಮಗುವಿನಂತೆ ಏನೂ ಮಾತಾಡಲಾರದೆ ನಿಮಿಷ ಸುಮ್ಮನಿದ್ದು ನಂತರ ಮೌನವಾಗಿ ಎದ್ದು ಹೋದನು.

ಅಂದು ಹುಣ್ಣಿಮೆ. ಮಾರನೆಯ ದಿನ ಜಯರಾಮುವು

ಬರುವ ಅವಧಿಯಾಗಿತ್ತು. ಸುಮಾರು ಸಾಯಂಕಾಲ ಐದುವರೆ ಗಂಟೆಯ ಸಮಯ. ಈಚೆಗೆ ನಿತ್ಯಕರ್ಮಗಳಿಗಾಗಿ ಹೊರತು ಬೇರೆ ಕಾಲಗಳಲ್ಲಿ ಮನೆಯನ್ನೇ ಬಿಟ್ಟು ಹೊರಗೆ ಹೊರಡದೇ ಇದ್ದ ಲಲಿತೆಯು ಅಂದು ಏಕೋ ಏನೋ ಹೊರಹೊರಟಳು. ತಮಗೆ ಅವಳು ಶ್ರೀ ರಾಮಚಂದ್ರನ ಮೇಲೆ ಆಣೆಯಿಟ್ಟು ಭಾಷೆಯಿತ್ತಂದಿನಿಂದ ಬಲೆಗೆ ಸಿಕ್ಕಿದ ಹಕ್ಕಿಯಂತೆ ನರಳುತ್ತಿದ್ದವಳು ಅಂದು ಹಾಗೆ ಹೊರಟದ್ದನ್ನು ನೋಡಿ ಶ್ಯಾಮಯ್ಯನವರು ಆಶ್ಚರ್ಯಪಟ್ಟರು. "ಎಲ್ಲಿಗಮ್ಮಾ? " ಎಂದು ಪ್ರಶ್ನೆ ಹಾಕಲು ಅವರ ಮನಸ್ಸು ಕಾತರಿಸಿತು. ಆದರೆ ತಮ್ಮಿಂದ ಬಹಳವಾಗಿ ನೊಂದಿರುವ ಮಗಳನ್ನು ಇಂತಹ ಸಣ್ಣ ವಿಷಯದಲ್ಲಿ ಅಡ್ಡಿಪಡಿಸುವುದು ಅವರ ಮನಸ್ಸಿಗೆ ಬರಲಿಲ್ಲ. ಈಚೀಚೆಗೆ ಅವಳ ಮನಸ್ಸು ತಮ್ಮ ಹಾದಿಗೆ ಕುದುರಿಕೊಳ್ಳುತ್ತಿದೆ; ಇನ್ನೇನೂ ಯೋಚಿಸಬೇಕಾಗಿಲ್ಲವೆಂದು ಮೊದಲು ಸಂತೋಷಪಟ್ಟಿದ್ದರು. ಅದರೂ ಮದುವೆಯಾಗದ ಪ್ರಾಯದ ಮಗಳು ಏಕಾಕಿಯಾಗಿ ಬಯಲಿಗೆ ಹೊರಟರೆ ತಂದೆಯಾದವರಿಗೆ ಎದೆ ಹೊಡೆದುಕೊಳ್ಳುವುದು ಸಹಜವೇ. ಎಲ್ಲದಕ್ಕಿಂತ ಹೆಚ್ಚಿನ ಭಯ ಮುಂದಿಯದು. ಲಲಿತೆಯೂ ಶಾರದೆಯ ಜೊತೆಯಲ್ಲಿ ಹೊರಟದ್ದರೆ ಶ್ಯಾಮಯ್ಯನವರು ಅಷ್ಟಾಗಿ ಯೋಚಿಸಬೇಕಾಗಿರಲಿಲ್ಲ. ಆದರೆ ಸಂಜೆಯ ಹೊತ್ತು, ಹಕ್ಕಿ ಗೂಡು ಸೇರುವಂತೆ ಹಳ್ಳಿಯ ಮಗಳು ಶಾರದೆ ಮನೆ ಸೇರುತ್ತಿದ್ದಳು. ಮನೆಯ ಕೆಲಸ ಕಾರ್ಯಗಳಲ್ಲಿ ಹಿರಿಯರಿಗೆ ಸಹಾಯಕಳಾಗಿ ನಿಂತುಬಿಡುತಿದ್ದಳು. ಇಂದಾದರೋ ಲಲಿತೆಯೊಬ್ಬಳೇ ಹೊರಟದ್ದಾಳೆ. ಅಲ್ಲದೆ ಅದೂ ಚಂದ್ರಯ್ಯನು ಮನೆಯಲ್ಲಿಲ್ಲದ ಹೊತ್ತು!

ಸಂಜೆಯ ಮಬ್ಬು ಕವಿಯುವ ಹೊತ್ತು! ಈಚೀಚೆಗೆ ಚಂದ್ರಯ್ಯನನ್ನು ಶ್ಯಾಮಯ್ಯನವರು ನೋಡುವುದೇ ಕಷ್ಟವಾಗಿತ್ತು. ಅವನೇ ಒಮ್ಮೊಮ್ಮೆ ಬಂದು ಕ್ಷೇಮಸಮಾಚಾರಗಳನ್ನು ವಿಚಾರಿಸಿ ಹೋಗುತ್ತಾನೆ. ಆಗ ಶ್ಯಾಮಯ್ಯನವರು ಅವನನ್ನು ಮಾತಾಡಿಸಲು ಬಾಯಿ ಬಾರದೆ ದಾಕ್ಷಿಣ್ಯಕ್ಕಾಗಿ ಒಂದೋ ಎರಡೋ ಮಾತನಾಡುತ್ತಾರೆ. ಅವರು ತಮ್ಮ ಶಿಷ್ಯನಿಗೇ ಹೆದರಿದ್ದರು! ಅಥವಾ ಶೀಲಸಂಪನ್ನನಾದ ಶಿಷ್ಯನಿಗೆ ತಾವು ಎಸಗಿದ ದ್ರೋಹವನ್ನು ನೆನೆದು ಅವರ ಧೈರ್ಯವು ಕುಗ್ಗಿ ತಲೆ ತಗ್ಗುತ್ತಿತ್ತು. ಅವನ ಮುಂದೆ ತಾವು ಅಪರಾಧಿಯೆಂಬಂತೆ ನಡೆದುಕೊಳ್ಳುತ್ತಿದ್ದರು. ಅಂಥವರಿಗೆ ಇಂದು ಮಾತ್ರ ಎಲ್ಲವೂ ವೈಪರೀತ್ಯವಾದಂತೆ ತೋರಿತು! ತಮ್ಮ ಮಗಳು ಓರ್ವಳಾಗಿ ಸಂಜೆಯ ಹೊತ್ತು ಹೀಗೆ ಹೊರಟಿದ್ದನ್ನು ನೋಡಿ ಚಂದ್ರಯ್ಯನು ಅವಳಿಗೆ ಏನಾದರೂ ಬೋಧಿಸಿರಬಹುದೇ? ಎಂಬ ಪ್ರಶ್ನೆಯೂ ಅವರ ನಡುಗುತ್ತಿರುವ ಹೃದಯವನ್ನು ಹೊಕ್ಕು ತಮ್ಮ ಪ್ರಿಯಶಿಷ್ಯನ ಶೀಲದ ವಿಷಯದಲ್ಲಿಯೇ ಅವರ ನಂಬಿಕೆಯು ಅಲುಗಾಡತೊಡಗಿತು! "ಏನೇ ಆಗಲಿ. ನಾಳೆಯೇ **ನಮ್ಮ** ಜಯರಾಮು ಬರುತ್ತಾನೆ. **ನಮ್ಮ** ವಸ್ತುವನ್ನು ನಾವು ಜೋಪಾನವಾಗಿ ಕಾಪಾಡಿಕೊಳ್ಳಬೇಕು. ಇಷ್ಟು ದಿನವೂ ಎಚ್ಚರವಾಗಿರುವ ಪ್ರಮೇಯ ಬಂದಿರಲಿಲ್ಲ. ಈ ಒಂದು ದಿನ ಇನ್ನೇನು? ಎಂದು ತಾತ್ಸಾರ ಮಾಡಬಾರದು. ಮೀರಿ ಹೋದಾಗ ಪ್ರಾಣ ಹಿಂಡಿಕೊಂಡರೆ ಬರುವುದೇನು? ಅವಮಾನ! ವಂಶಕ್ಕೆ ಕೆಟ್ಟ ಹೆಸರು! ಜೀವವಿರುವವರೆಗೂ ಪ್ರಪಂಚದ ಕಣ್ಣೆದುರು ನರಕಯಾತನೆ!"---ಶ್ಯಾಮಯ್ಯ

ನವರು ತಮ್ಮ ಯೋಜನೆಗಳಿಂದ ತಾವೇ ನಡುಗಿಹೋದರು! ಅವಸರವಾಗಿ ಎದ್ದು ಷರಟನ್ನೂ ಕೋಟನ್ನೂ ಹಾಕಿಕೊಂಡು ಬಿಳಿಯ ನಾಡುರುಮಾಲನ್ನು ಸುತ್ತಿಕೊಂಡು ಈಚೀಚೆಗೆ ಸುಮಾರು ಎರಡು ತಿಂಗಳಿಂದಲೂ ಉಪಯೋಗಿಸುತ್ತಿದ್ದ ಊರುಗೋಲನ್ನು ಹಿಡಿದುಕೊಂಡು ಕಾಲಲ್ಲಿ ಎಕ್ಕಡಗಳನ್ನು ಹಾಕಿಕೊಂಡು ಹೊರಬಿದ್ದರು. ದಾರಿಯಲ್ಲಿ ಚಿಕ್ಕ ಬಾಲಕರು "ತಾತಾ, ಲಲಿತಕ್ಕಯ್ಯ ಶಂಭುಗಿರಿ ಬೆಟ್ಟದ ಕಡೆ ಹೋದರು." ಎಂದು ಗಟ್ಟಿಯಾಗಿ ಹೇಳಿದರು. ಮನೆಗಳ ಜಗಲಿಗಳ ಮೇಲೆ ಕುಳಿತಿದ್ದ ಊರಿನ ವಯಸ್ಸಾದ ಕೆಲವರು ಮಕ್ಕಳ ಮಾತನ್ನು ಕೇಳಿಸಿಕೊಂಡರು. ಆದರೆ ಶ್ಯಾಮಯ್ಯನವರ ವಿಷಯದಲ್ಲಿ ಅವರಿಗೆ ತುಂಬಾ ಗೌರವ ಪ್ರೀತಿಗಳಿದ್ದುದರಿಂದ, "ಶ್ಯಾಮಯ್ಯ ಗುರುಗಳಿಗೆ ನಮಸ್ಕಾರ.. ಈಗ ಆರೋಗ್ಯ ಚೆನ್ನಾಗಿದೆಯೇ? ಎಲ್ಲಿಗೆ ಗುರುಗಳ ಇಷ್ಟು ಹೊತ್ತಿನಲ್ಲಿ ಹೊರಟಿರಿ? ತೋಟದ ದಾರಿಯನ್ನೂ ಹಿಡಿದಿಲ್ಲ? ಲಲಿತಮ್ಮನು ಆಗಲೇ ಇದೇ ಕಡೆ ಹೋದರಲ್ಲಾ ಎಲ್ಲಿಗೆ?" ಎಂದು ಕೇಳಿದರು. ಶ್ಯಾಮಯ್ಯನವರ ಅಭಿಮಾನ ಮಾನ ಮರ್ಯಾದೆಗಳು ಒಳಗೇ ಉಬ್ಬಸಗೊಂಡುವು! ಆದರೆ ಮೇಧಾವಿಗಳೂ ಅನುಭವಮನೋವಿಜ್ಞಾನವಿಶಾರದರೂ ಆದ ಶ್ಯಾಮಯ್ಯನವರು ಬಹಳ ಸಾವಧಾನದ ದನಿಯಲ್ಲಿ, "ಎಲ್ಲಿಗೂ ಇಲ್ಲಪ್ಪಾ. ನಾಳೆ ನಮ್ಮ ಅಳಿಯ ಬರುತ್ತಾನೆ. ಇನ್ನು ಒಂದೆರಡು ದಿನಗಳಲ್ಲಿ ನಾನೂ ನನ್ನ ಮಗಳೂ ಈ ಊರು ಬಿಟ್ಟು ಹೋಗುವ ವಿಷಯ ನಿಮಗಾಗಲೇ ತಿಳಿದೇ ಇದೆ. ಇದೇ ಕೊನೆಯ ಅವಕಾಶ. ಈ ಹೊತ್ತು ಹುಣ್ಣಿಮೆ ಬೇರೆ. ಆ ಶಂಭುಗಿರಿಯ ಕಲ್ಯಾಣೇಶ್ವರನನ್ನು ದರ್ಶನ

ಮಾಡಿಕೊಂಡು ಬರೋಣ; ಹಾಗೇ ಸ್ವಲ್ಪ ತಂದೆ ಮಕ್ಕಳು ಆರಾಮವಾಗಿ ಗಾಳಿಸೇವನೆ ಮಾಡಿಕೊಂಡು ಬೆಳುದಿಂಗಳಿನ ಬೆಳಕಿನಲ್ಲಿ ಮಾತುಕಥೆಯಾಡಿಕೊಂಡು ಬರೋಣ; ಅಂತ ಹೊರಟೆವು. ನಾನೇ ಲಲಿತನ್ನ, ಮುಂದೆ ನಡೆ, ನಮ್ಮ ಶ್ರೀರಂಗಪ್ಪನ ಅಂಗಡಿಯಲ್ಲಿ ನಾಸು ಪೂಜೆಯ ಸಾಮಗ್ರಿಗಳನ್ನು ತರುತ್ತೇನೆ, ಎಂದು ಕಳಿಸಿದೆ '' ಎಂದರು. ಊರಿನ ಜನರಿಗೆ ಮೊದಲಿನಿಂದಲೂ ಚಂದ್ರಣ್ಣ ಲಲಿತೆಯರ ವಿಷಯದಲ್ಲಿ ತುಂಬಾ ಸದ್ಭಾವನೆಯಿತ್ತು. ಅವರಿಬ್ಬರೂ ಜೊತೆಯಲ್ಲಿರುವುದು ಅವರ ಕಣ್ಣಿನಲ್ಲಿ ಈಗ್ಗೆ ಹನ್ನೊಂದು ವರ್ಷಗಳಿಂದಲೂ ಸಹಜವಾಗಿಹೋಗಿತ್ತು. ಅವರನ್ನು ಒಬ್ಬಳೇ ತಾಯಿ ಸಾಕಿದ ಅಣ್ಣ ತಂಗಿಯರೆಂದೇ ಆ ಜನರು ಭಾವಿಸಿದ್ದರು. ಅಲ್ಲದೆ ಚಂದ್ರಯ್ಯನ ವ್ಯಕ್ತಿತ್ವ ಚಾರಿತ್ರಗಳ ದಿವ್ಯತೆ ಮತ್ತು ಭವ್ಯತೆಗಳು ಅವರಲ್ಲಿ ಬಹು ಉನ್ನತವಾಟ್ಟದ ಗೌರವ ಪೂಜ್ಯತೆಗಳನ್ನು ಸ್ಥಿರವಾಗಿ ಸ್ಥಾಪಿಸಿಬಿಟ್ಟಿದ್ದುವು. ಆದುದರಿಂದ ಶ್ಯಾಮಯ್ಯನವರ ಮಾತು ಅವರಿಗೆ ಪೂರ್ತಿ ಸಮಂಜಸವಾಗಿ ಕಂಡು '' ಆಗಲಿ, ಹೋಗಿ ಬನ್ನಿ ಗುರುಗಳೆ ಲಲಿತಮ್ಮ ಆಗಲೇ ದೂರ ಹೋದರು. ಅಥವಾ ನಿಮಗಾಗಿ ನಡುದಾರಿಯಲ್ಲಿ ಕಾಯುತ್ತಿರಬೇಕು.'' ಎಂದರು. ಶ್ಯಾಮಯ್ಯನವರು ಮುಂದೆ ನಡೆದರು.

ಬೆಟ್ಟದ ಕಲ್ಯಾಣೇಶ್ವರನ ಪೂಜೆ ಮಾಡಿಸಬೇಕೆಂಬ ಮಾತು ಶ್ಯಾಮಯ್ಯನವರ ಬಾಯಲ್ಲಿ ಸಮಯಸ್ಫೂರ್ತಿಯಿಂದ ಮಾತ್ರ ಹೊರಹೊಮ್ಮಿತ್ತು. ಈಗ ಅದನ್ನು ನೆನೆದು ಅವರಿಗೆ ರೋಮಾಂಚನವಾಯಿತು! '' ಈಶ್ವರಾ! ನಿನ್ನನ್ನು ಮರೆತು ದ್ವೇಷಭಾವನೆಯಿಂದ ಹೊರಟಿದ್ದೆ. ನಿನ್ನ ದಯದಿಂದಲೇ

ನಿನ್ನ ಪ್ರೀತಿಯ ಮಾತು ನನ್ನ ನಾಲಗೆಯಲ್ಲಿ ಉದ್ಭವಿಸಿತು. ಸ್ವಾಮೀ ಚಂದ್ರಯ್ಯನ ಮೇಲಾಗಲೀ ಲಲಿತಮ್ಮನ ಮೇಲಾಗಲೀ ಯಾವ ದ್ವೇಷ ಭಯ ಆಶಂಕೆಗಳೂ ಇಲ್ಲದ ಮಮತೆಯಿಂದ ಈಗ ಹೋಗುತ್ತಿದ್ದೇನೆ. ನೀನು ಈ ದೀನಪಿತೃವಿನ ಮಾನರಕ್ಷಣೆ ಮಾಡಬೇಕು." ಎಂದು ಪ್ರಾರ್ಥಿಸಿಕೊಳ್ಳುತ್ತಾ ತನಗಾಪ್ತನಾದ ಶ್ರೀರಂಗಶ್ರೇಷ್ಠಿಯ ಅಂಗಡಿಗೆ ಹೋದರು. ಅಲ್ಲಿ ತೆಂಗಿನ ಕಾಯಿ, ಹಣ್ಣುಹಂಪಲು, ದೀಪದ ಬತ್ತಿಗಳು, ಊದಿನ ಕಡ್ಡಿ, ಎಲೆ ಅಡಿಕೆ, ಎಣ್ಣೆಯ ಸೀಸೆ, ಬೆಂಕಿಪೆಟ್ಟಿಗೆ-ಮುಂತಾದ ಸಕಲ ಪೂಜಾಪರಿಕರಗಳನ್ನೂ ತೆಗೆದುಕೊಂಡು ಶ್ರೇಷ್ಠಿಯವರ ಮನೆಯದೇ ಹೂವಿನ ತಟ್ಟೆ, ತೀರ್ಥದ ಚೆಂಬು, ಚಮಚ ಮುಂತಾದುವನ್ನು ಪಡೆದು ಶ್ರೇಷ್ಠಿಯೇ ಕೊಟ್ಟ ಒಂದು ಕೈಚೀಲದಲ್ಲಿ ಎಲ್ಲವನ್ನೂ ಇಟ್ಟುಕೊಂಡು ಕಲ್ಯಾಣೇಶ್ವರನ ಬೆಟ್ಟದ ಕಡೆ ಹೊರಟರು.

ಶಂಭುಗಿರಿಯು ಊರಿಗೆ ಸುಮಾರು ಎರಡು ಮೈಲಿಗಳ ದೂರದಲ್ಲಿತ್ತು. ಕುರಿ, ಮೇಕೆ, ದನ, ಕರು- ಮುಂತಾದುವನ್ನು ಕಾಯಲು ಹುಡುಗರು ಆ ಬೆಟ್ಟದ ಕಡೆ ಹಗಲು ಹೊತ್ತು ಸುಳಿದರೂ ಐದುಗಂಟೆಗೆಲ್ಲಾ ಆ ಬೆಟ್ಟವು ನಿರ್ಜನ ಪ್ರದೇಶವಾಗಿರುತಿತ್ತು. ಪಕ್ಕದಲ್ಲಿಯೇ ಆ ಊರಿನ ದೊಡ್ಡ ಕೆರೆ. ಅದರಲ್ಲಿ ಅರ್ಧ ಮಾತ್ರ ನೀರಿತ್ತು. ಆ ಕೆರೆಯ ಅಂಗಳವನ್ನು ಬಿಟ್ಟು ಸುತ್ತಲೂ ದೂರಸಮೀಪಪ್ರದೇಶಗಳಲ್ಲೆಲ್ಲಾ ವೃಕ್ಷಸಮೂಹಗಳು ಇದ್ದು ಹಸುರುದೇಶದ ನಡುವೆ ಕೆಂಪು ಭೂಮಿಯಲ್ಲಿ ಜಲದೇವತೆಯು ಆವಾಸಗೊಂಡಂತಿತ್ತು. ಸಂಧ್ಯಾಸೂರ್ಯನ ಕೆಂಬೆಳಕಿನಲ್ಲಿ ಲಲಿತೆಯು ಬೆಟ್ಟದ ಓರೆಯನ್ನೇರುತ್ತಿದ್ದುದನ್ನು ಸ್ವಾಮಯ್ಯನವರು ದೂರದಿಂದಲೇ

ಕಂಡರು. ಅವಳು ಕಣ್ಮರೆಯಾಗುವವರೆಗೂ ಮರೆಯಾಗಿದ್ದು ನಂತರ ತಾವೂ ಪ್ರಯಾಸಪೂರ್ವಕವಾಗಿ ಗುಡ್ಡವನ್ನು ಹತ್ತಿದರು. ದೇವಾಲಯದ ಮುಂಭಾಗವು ವಿಶಾಲವಾಗಿದ್ದು ಬೆಟ್ಟದ ತಲೆಯ ಒಂದು ಭಾಗವನ್ನು ಸಮತಳವಾಗಿ ಸವರಿದಂತಿದ್ದುದಲ್ಲದೆ ಒಂದುಕಡೆ ಕೋಟೆಯೆಂಬಂತೆ ಎತ್ತರವಾದ ಬಂಡೆಗಳ ಗೋಡೆಯಿತ್ತು. ಉಳಿದ ಕಡೆಗಳಲ್ಲಿ ಹಸುರು ಪೊದೆಗಳೂ, ಮುತ್ತುಗ, ಕಾಡುಹಲಸು ಮುಂತಾದ ಮರಗಿಡಗಳೂ ಬೆಳೆದು ವನಭಿತ್ತಿಯನ್ನು ರಚಿಸಿದಂತಿತ್ತು. ಆದರೆ ದೇವಾಲಯದ ಮುಂಭಾಗದ ಚಪ್ಪಡಿಯ ಮೇಲೆ ನಿಂತವರಿಗೆ ಆ ಎತ್ತರದಿಂದ ಪೂರ್ವದಿಗಂತವೂ ಬಹುದೂರದ ವರೆಗಿನ ಭೂವಿಸ್ತಾರವೂ ಚೆನ್ನಾಗಿ ಕಾಣುತ್ತಿದ್ದುವು. ಶ್ಯಾಮಯ್ಯನವರು ಕಲ್ಯಾಣತೀರ್ಥವೆಂದು ಪ್ರಸಿದ್ಧವಾದ ಹೊಂಡದ ಸಮೀಪಕ್ಕೆ ಹೋಗಿ ದೇವಾಲಯದ ಮುಂಭಾಗವು ಸ್ಪಷ್ಟವಾಗಿ ಕಾಣುವಂಥಾ ಒಂದು ಸ್ಥಳವನ್ನು ಸೇರಿ ಪೊದೆಯೊಂದರ ಹಿಂಭಾಗದಲ್ಲಿ ಮರೆಯಾಗಿ ಮರವೊಂದಕ್ಕೆ ಒರಗಿ ನಿಂತರು.

ಚಂದ್ರಯ್ಯ ಮೂಡಣಕ್ಕೆದುರಾಗಿ ಶಿವಾಲಯದ ಮುಂಭಾಗದ ಅಂಕಣದಲ್ಲಿ ಶಿಲಾಸ್ತಂಭವೊಂದಕ್ಕೆ ಒರಗಿ ಕುಳಿತಿದ್ದನು. ಕಾಲುಸಪ್ಪಳದ ಸದ್ದನ್ನು ಆಲಿಸಿ ತಿರುಗಿ ನೋಡಿದನು. ಲಲಿತೆಯು ಗುಡಿಯ ಕೆಳಗೆ ಸ್ವಲ್ಪದೂರದಲ್ಲಿ ಇನ್ನೊಂದು ಶಿಲಾಸ್ತಂಭದ ಬುಡಕ್ಕೆ ತನ್ನ ತಲೆಯನ್ನೊರಗಿಸಿ ನಿಂತು ಚಂದ್ರಯ್ಯನ ಕಡೆ ದೀನಾರ್ತವಾದ ನೋಟವನ್ನು ಬೀರುತ್ತಾ ಅಳುತ್ತಿದ್ದಳು. ಅದನ್ನು ಕೇಳಿಸಿಕೊಂಡ ಚಂದ್ರಯ್ಯನು ಆಕಡೆ ನೋಡಿ ಬೆಕ್ಕಸಬಟ್ಟು ದಡಿಲ್ಲನೆ ಎದ್ದು ನಿಂತು, " ಲಲಿತಾ, ಇದೇನು ? ಇಲ್ಲಿಗೇಕೆ ಬಂದೆ? ಇಲ್ಲಿ ನಾನಿರುವೆ

ನೆಂದು ಯಾರು ನಿನಗೆ ಹೇಳಿದರು?" ಎಂದು ಗದ್ಗದಕಂಠ ನಾಗಿ ಪ್ರಶ್ನಿಸಿದನು.

ತಲೆಯನ್ನು ನಸುಬಾಗಿ ಕೃತಾಪರಾಧಿನಿಯಂತೆ ಶೋಕ ವಿಹ್ವಲಳಾಗಿ "ಚಿನ್ನಯ್ಯಮಾವನವರು ಹೇಳಿದರು." ಎಂದಳು.

ಚಂದ್ರಯ್ಯ: "ನೀನು ಹೀಗೆ ಬರಬಾರದಾಗಿತ್ತು ಲಲಿತಾ. ಆದರೂ ಚಿಂತೆಯಿಲ್ಲ. ಭಯಪಡಬೇಡ. ಬಾ ಕುಳಿತುಕೋ..... ನೀನು ಮಾಡಿದ ಕೆಲಸ ಬಹಳ ಒಳ್ಳೆಯದು ಲಲಿತಾ." ಎಂದನು.

ಚಂದ್ರಯ್ಯನ ಕೊನೆಯ ಮಾತನ್ನು ಲಲಿತೆಯು ವ್ಯಂಗ್ಯ ನುಡಿಯೆಂದು ಅರ್ಥಮಾಡಿಕೊಂಡಳು. ಅವಳ ಕರುಳನ್ನು ತಿವಿದಂತಾಯಿತು. ಘೋತ್ರ ಜುಬ್ಬಗಳಲ್ಲಿ ಧೀರಮನೋಹರ ನಾಗಿ ನಿಂತಿದ್ದ ಚಂದ್ರಯ್ಯನ ಕಾಲುಗಳನ್ನು ತಬ್ಬಿಕೊಂಡು ನೋಯುವ ದನಿಯಿಂದ, "ಚಂದ್ರಯ್ಯಭಾವಾ! ನಾನು ಮಾಡಲಿಲ್ಲ. ನನ್ನ ತಂದೆಯವರು ನಂಬಿಸಿ ನನ್ನಿಂದ ಭಾಷೆ ಯನ್ನು ತೆಗೆದುಕೊಂಡರು. ಈಗ ನೀವೂ ಹೀಗೆ ಕೈಬಿಟ್ಟರೆ ನನ್ನ ಗತಿಯೇನು ಭಾವಯ್ಯಾ!!" ಎಂದಳು.

ಬಳಬಳ ಸುರಿಯುವ ಕಣ್ಣೀರಿನಿಂದ ಕೂಡಿದ ತನ್ನ ಕೆನ್ನೆಯನ್ನು ಲಲಿತೆಯು ಚಂದ್ರಯ್ಯನ ಮೊಳಕಾಲುಗಳಿಗೆ ಒತ್ತಿ ತನ್ನ ಎಡದೋಳಿನಿಂದ ಅವನ ಕಾಲುಗಳನ್ನು ತಬ್ಬಿಕೊಂಡು ಬಲಗೈಯ್ಯಲ್ಲಿ ಚಂದ್ರಯ್ಯನ ಇಳಿಯಬಿಟ್ಟಿದ್ದ ಎಡಗೈ ಹಸ್ತವನ್ನು ಹಿಡಿದುಕೊಂಡು ತನ್ನ ವದನಾರವಿಂದ ವನ್ನು ಮೇಲಕ್ಕೆತ್ತಿ ಚಂದ್ರಯ್ಯನ ಮುಖವನ್ನೇ ದೀನಳಾಗಿ ನೋಡುತ್ತಿದ್ದಳು. ಲಲಿತೆಯ ಕೋಮಲವಾದ ಕೆನ್ನೆ, ಮೃದುವಾದ ತುಂಬಿದೆದೆ, ಕಾಲುಗಳನ್ನು ಸುತ್ತುವರಿದ ಬಳ್ಳಿ

ದೋಳು, ಕೈಯನ್ನು ಹಿಡಿದ ಹೊಂದಾವರೆ ಹೂವಿನಂಥ ಹಸ್ತ--ಇವುಗಳ ಆಲಿಂಗನಸ್ಪರ್ಶದಿಂದ ಚಂದ್ರಯ್ಯನು ಅಸ್ಥಿರನಾದನು! ಮನ್ಮಥನು ತನ್ನ ಸಕಲ ಸೈನ್ಯದೊಡನೆ ಅವನ ಹೃದಯತೋಂಟದೊಳಕ್ಕೆ ನುಗ್ಗಿದನು! ನಿರ್ಜನವಾದ ಸ್ಥಳ! ನೀರವವಾದ ಸಂಜೆಯಿರುಳು! ಮೂಡಣದಲ್ಲಿ ಹುಣ್ಣಿಮೆಯ ಚಂದ್ರೋದಯಕ್ಕೆ ದೆಸೆವೆಣ್ಣು ಓಕುಳಿಯನ್ನೆರಚಿ ಸ್ವಾಗತಿಸುತ್ತಿದ್ದಾಳೆ! ಚಂದ್ರಯ್ಯನ ಶರೀರವೆಲ್ಲಾ ಪ್ರಣಯದ ವಳ್ಳುರಿಯಲ್ಲಿ ಸಿಕ್ಕಿ ಜ್ವಾಲೆಯಾಯಿತು! ದಿಕ್ಕುದೆಸೆಗಳೆಲ್ಲವೂ ಅವನಿಗೆ ರಾಗಪೂರ್ಣವಾಗಿ ತೋರಿದುವು! ಪ್ರಣಯಭಾವದ ಉತ್ಕಟಾವಸ್ಥೆಯಿಂದ ಅವನ ಚಿತ್ತವು ಭ್ರಮಣವಾಗುತ್ತಿತ್ತು!-- ಆಹಾ ಮಾನವನ ಮನಸ್ಸೇ, ಸಮಯ ಸಿಕ್ಕಿತೆಂದರೆ ನೆಗೆದೋಡುವ ನಿನ್ನ ಲಯವೇಗವನ್ನು ಚೆಂಡು ಮುರಿದು ಕುಕ್ಕರಿಸಿ ತಡೆದು ನಿಲ್ಲಿಸಿದ ಮಹಾನುಭಾವನುಂಟೇ? ಅಂಥಾ ಮಹಾತ್ಮರು ಎಷ್ಟು ಮಂದಿಯಿದ್ದಾರು? ಅಂಥವರಿಗೆ ಇದೋ ನನ್ನ ಹಣೆಯನ್ನು ಮಣಿಯುತ್ತೇನೆ.- ಇನ್ನು ಒಂದೆರಡು ನಿಮಿಷಗಳಲ್ಲಿ ಚಂದ್ರಯ್ಯನ ಪಾಡು ಏನಾಗುತ್ತಿತ್ತೋ? ಬಲ್ಲವರಾರು? ಧನ್ಯರು ಅವನನ್ನು ಹೆತ್ತ ಮಾತಾಪಿತೃಗಳು! ಧನ್ಯರು ಅವನಿಗೆ ದೊರಕಿದ ಅನಂತಪುರದ ಗುರುವರ್ಯರು! ಅವನ ಚಿನ್ಮಯದಲ್ಲಿ ತಪಸ್ವಿನಿಯಂತಿದ್ದ ಅವನ ತಾಯಿ ಗೌರಮ್ಮನವರ ವಾತ್ಸಲ್ಯಪೂರ್ಣವಾದ ಚಂದ್ರವದನವು ಮೂಡಿ ಬಂದಿತು! ಅವರ ಹಿಂದುಗಡೆಯೇ ಅನಂತಪುರದ ಆ ದಿವ್ಯ ಗುರುಗಳ ಬೆಳ್ಗೂದಲಿನ ಋಷಿವದನವು ಮೂಡಿ ಬಂದಿತು! ಅವರ ರೂಪುಗಳು ಹೊಳೆದು ಮಿಂಚಿದಾಕ್ಷಣ ಹಿಂದುಗಡೆಯಿಂದಲೇ ಧವಳಜ್ಯೋತಿಯೊಂದು ಜಗಜಗಾಯಮಾನವಾಗಿ

ಉರಿಯಲಾರಂಭಿಸಿತು! ಪ್ರಣಯರಾಗದ ರಕ್ತವರ್ಣದ ಅಗ್ನಿಗೂ ಆ ಚಿಜ್ಜ್ಯೋತಿಗೂ ಅವನ ಅಂತರಾತ್ಮವಲಯದಲ್ಲಿ ಆಗುತ್ತಿದ್ದ ಪರಾಕ್ರಮದ ಹೋರಾಟವನ್ನು ಅವನು ಪ್ರತ್ಯಕ್ಷವಾಗಿ ನೋಡಿದನು! ಇದ್ದಕ್ಕಿದ್ದಂತೆ ಲಲಿತೆಯನ್ನು ಹಿಂದಕ್ಕೆ ತಳ್ಳಿ, "ದೇವಾ! ದೇವಾ! ಮನ್ನಿಸು! ಮನ್ನಿಸು!" ಎಂದು ಕರುಳಿರಿಯುವಂತೆ ಚೀರಿಡುತ್ತಾ ಶಿವಾಲಯದೊಳಗೆ ಓಡಿ ಹೋಗಿ ನೀಲಶಿಲೆಯ ಶಿವಲಿಂಗದ ಮೇಲೆ ದೊಪ್ಪನೆ ಬಿದ್ದನು. ಲಲಿತೆಯು ದಿಗ್ಭ್ರಮೆ ಹಿಡಿದವಳಂತೆ ನಡುಗಲಾರಂಭಿಸಿದಳು! ಪ್ರಾಪೆಯ ಮರೆಯಲ್ಲಿದ್ದ ಶ್ಯಾಮಯ್ಯನವರ ಜೀವ ಜಲ್ಲೆಂದಿತು! ಚಂದ್ರಯ್ಯನಿಗೆ ಏನು ಅಪಾಯವಾಯಿತೋ ನೋಡೋಣವೆಂದು ಅವರ ಮನಸ್ಸು ನೂರು ಕುದುರೆಗಳ ವೇಗದಿಂದ ಮುನ್ನುಗ್ಗಿತು. ಆದರೆ ಅವರ ಆತ್ಮವಾಣಿಯು, "ಹೆದರದಿರು! ಹೆದರದಿರು! ಎಲ್ಲವೂ ನಿನ್ನ ಇಚ್ಛೆಯಂತೆ ನಡೆಯುತ್ತಿದೆ!" ಎಂದು ಹೇಳಿತು. ತಟತಟ ನಡುಗುತ್ತಿದ್ದ ತಮ್ಮ ಕಾಲುಗಳನ್ನು ಭದ್ರವಾಗಿ ಊರಿಕೊಂಡು ತಮ್ಮ ಊರುಗೋಲನ್ನು ಭದ್ರವಾಗಿ ಹಿಡಿದು ನಿಂತರು. ಸ್ವಲ್ಪ ಹೊತ್ತಿನಲ್ಲಿ ಚಂದ್ರಯ್ಯನು ಗರ್ಭಗುಡಿಯಿಂದ ಮೆಲ್ಲಗೆ ಹೊರಬಿದ್ದು ಲಲಿತೆಯು ಪಾರ್ಶ್ವದಲ್ಲಿ ಶಿಲಾಸ್ತಂಭಕ್ಕೆ ಒರಗಿ ನಿಂತು, "ಲಲಿತಾ. ಇನ್ನೆರಡು ನಿಮಿಷವಿದ್ದರೆ ನಾವಿಬ್ಬರೂ ನರಕದಲ್ಲಿ ಬೀಳುತ್ತಿದ್ದೆವು. ಒಂಟಿಯಾಗಿ ನೀನು ಇಲ್ಲಿಗೆ ಬಂದು ಎಂತಹ ತಪ್ಪು ಮಾಡಿದೆ ಲಲಿತಾ?" ಎಂದನು.

"ಭಾವಯ್ಯಾ. ನಾನು ಮಾಡಿದುದು ತಪ್ಪೇ? ನನ್ನ ಹೃದಯದಲ್ಲಿರುವುದು ಆದರ್ಶಪ್ರೇಮವಲ್ಲವೇ?"

"ಧರ್ಮಕ್ಕೆ ವಿರುದ್ಧವಾದುದು ಆದರ್ಶವಲ್ಲ."

“ ಒಲಿದ ಹೃದಯಗಳನ್ನಗಲಿಸುವುದು ಧರ್ಮವೇ ಭಾವಯ್ಯಾ? ”

“ ಅಯ್ಯೋ ಲಲಿತಾ ! ಪಿತೃನಿಂದೆಯನ್ನೇಕೆ ಮಾಡುವೆ ? ತಾಯಿಲ್ಲದ ಕೂಸನ್ನು ಇಲ್ಲಿಯವರೆಗೂ ತಾವೇ ತಾಯಿಯಾಗಿ ಸಲಹಿದ ತಂದೆಯವರಿಗೆ ನೀನು ಅನಂತ ಕೃತಜ್ಞಳಾಗಿರಬೇಕು.”

“ ಭಾವಯ್ಯಾ, ನಾನು ಪಿತೃನಿಂದೆಯನ್ನುದ್ದೇಶಿಸಲಿಲ್ಲ. ನಮ್ಮಿಬ್ಬರ ಎರಡರಿಯದ ಪ್ರೇಮವನ್ನು ಛಿದ್ರಗೈಯುತ್ತಿರುವ ಕ್ರೂರವಿಧಿಯನ್ನು ನಿಂದಿಸುತ್ತೇನೆ.”

“ ಆದರ್ಶಪ್ರೇಮವನ್ನು ಬ್ರಹ್ಮನೂ ಛಿದ್ರಗೈಯಲಾರನು ! ” ಲಲಿತೆಯ ಮುಖದಲ್ಲಿ ನಲ್ಮೆಯು ತುಳುಕಿತು ! ಸಂಭ್ರಮಾನಂದಗಳಿಂದ,

“ ಭಾವಯ್ಯಾ! ಹಾಗಾದರೆ ನೀವು ನನ್ನನ್ನು ಕೈಬಿಡುವುದಿಲ್ಲ !! ”. ಚಂದ್ರಣ್ಣನು ಮೂಡಣವನ್ನೇ ದಿಟ್ಟಿಸಿ ನೋಡುತ್ತಾ,

“ ಲಲಿತಾ, ನನಗಿಂತಲೂ ನೀನು ಹೆಚ್ಚು ಜ್ಞಾನಿಯೆಂದು ನಮ್ಮ ಗುರುವರ್ಯರು ಹೊಗಳುತ್ತಿದ್ದರಲ್ಲವೇ ? ಅದನ್ನು ಮರೆತೆಯಾ ? ತಿಳಿಯದವಳಂತೆ ನಡೆಯಬೇಡ ಲಲಿತಾ. ಆದರ್ಶಪ್ರೇಮಕ್ಕೆ ತನುವಿನ ಅವಲಂಬನವೇಕೆ ? ಆದರ್ಶಪ್ರೇಮವು ಶರೀರಸಂಗದಿಂದಲೇ ಸಾರ್ಥಕತೆಯನ್ನು ಪಡೆಯಬೇಕೆ ? ಅದಕ್ಕಿಂತ ಉತ್ತಮ ಮಾರ್ಗವನ್ನು ಹೇಳುತ್ತೇನೆ ಕಿವಿಗೊಟ್ಟು ಲಾಲಿಸು ಲಲಿತಾ. ಈ ಹನ್ನೊಂದು ವರ್ಷಗಳೂ ನಾವು ಜೊತೆಯಲ್ಲಿದ್ದರೂ ಪರಿಶುದ್ಧವಾದ

ಪ್ರೇಮಜೀವನವನ್ನು ಬಾಳಲಿಲ್ಲವೇ ಲಲಿತಾ? ಅದನ್ನು ನೆನೆಸಿಕೋ." ಚಂದ್ರಯ್ಯನ ದನಿಯಲ್ಲಿ ಮಗುವಿನ ಕಂಠದ ನಲ್ಮೆಯಿತ್ತು. ಋಷಿಗಳ ಕರುಣೆಯಿತ್ತು. ತಾಯಿಯ ಮಮತೆಯಿತ್ತು. ಅಣ್ಣನ ಪ್ರೀತಿಯಿತ್ತು:

"ಹಿಂದೆ ಮುಂದೆ ಇಲ್ಲದೆ ಒರ್ವಸೊಂಟಿಗನಾಗಿ ಜನಿಸಿದ ಈ ಪರದೇಶಿಗೆ ನೀನೇ ತಂಗಿಯಾಗು ಲಲಿತಾ. ನನ್ನ ತಾಯಿಯು ಮೊದಲಿಂದಲೂ ನಿನ್ನನ್ನು ಸ್ವಂತ ಮಗಳೆಂದೇ ಭಾವಿಸಿದ್ದಾರೆ. ಸತಿಪತಿಗಳಾಗುವುದರಿಂದ ಬರುವ ಹಿರಿಮೆಯೇನು? ಅಣ್ಣತಂಗಿಯರಾಗುವುದರಿಂದ ಬರುವ ಕಿರಿಮೆಯೇನು? ಇಲ್ಲಿಯವರೆಗೂ ಅನೇಕರ ಬಾಯಲ್ಲಿ--ಪರಿಚಿತರ, ಅಪರಿಚಿತರ, ಹಿರಿಯರ, ಕಿರಿಯರ--ಬಾಯಲ್ಲಿ ನೀನು ನನ್ನ ತಂಗಿಯೆಂಬ ಮಾತುಗಳನ್ನೇ ಕೇಳಿದ್ದೇನೆ. ಹಾಗೆಯೇ ನಾವಿಬ್ಬರೂ ನಡೆದುಕೊಂಡಿದ್ದೇವೆ. ನಮ್ಮ ಗುರುಗಳು ಹೇಳುತ್ತಿದ್ದುದು ಅದನ್ನೇ ಅಲ್ಲವೆ? ಜ್ಞಾಪಿಸಿಕೋ ಲಲಿತಾ. ಆದುದರಿಂದ ನಿನ್ನ ತಂದೆಯವರಿಗೆ ನೀನು ಕೊಟ್ಟಿರುವ **ಭಾಷೆಯಂತೆ** ನಡೆದುಕೊಂಡು ಧರ್ಮವನ್ನು ಪಾಲಿಸು. ಅದರಿಂದ ಎಲ್ಲರಿಗೂ ಸಂತಸವಾಗುತ್ತದೆ."

ಚಂದ್ರಯ್ಯನ ಮಾತುಗಳನ್ನು ಕೇಳಿ ಲಲಿತೆಯು ನೆಲವನ್ನು ನೋಡುತ್ತಾ ಎಳೆಯ ಮಗುವಿನಂತೆ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಕರುಣೆಯಿಂದ ಕರಗಿದ ಹೃದಯನಾಗಿ ಚಂದ್ರಯ್ಯನು ಅವಳ ಸಮೀಪಕ್ಕೆ ಬಂದನು. ಲಲಿತೆಯು ಅವನ ಪಾದಗಳನ್ನು ಹಿಡಿದುಕೊಂಡು,

"ಹಾಗಾದರೆ ನನ್ನನ್ನು ಇನ್ನು ಸ್ವಲ್ಪ ದಿನಗಳಲ್ಲಿಯೇ ಮರೆತುಬಿಡುವಿರೇನು ಭಾವಯ್ಯಾ?" ಎಂದು ಅಳುತ್ತಲೇ

ಕೇಳಿದಳು. ಚಂದ್ರಯ್ಯನು ನಗುತ್ತಾ, “ಲಲಿತಾ, ನನ್ನ ಮುದ್ದು ಲಲಿತಾ,

ಕಮಳಿನಿಗೆ ಕಮಲಬಂಧುಗೆ ।
ಕುಮುದಿನಿಗಾ ಕುಮುದಿನೀಶ್ವರಂಗೆಂತೀಗಳ್ ॥
ನಮಗಂತಿರ್ಪೆಡೆಗಳ್ ದೂ ।
ರಮಾದೊಡಂ ಪ್ರೀತಿ ಮಾಣದಾಕಲ್ಪಾಂತಂ ॥

ಲಲಿತಾ, ಕಾದಂಬರೀ ಕಾವ್ಯದ ಈ ಪದ್ಯವನ್ನು ದೂರ ಸಂಬಂಧಿಗಳಾದ ನಮಗೇ ಅನ್ವಯಿಸಿಕೊಂಡು ನಾವಿಬ್ಬರೂ ಅದೆಷ್ಟು ಸಾರಿ ಓದಿ ಚರ್ಚಿಸಿ ಮನನಮಾಡಿಕೊಂಡಿಲ್ಲ! ಲಲಿತಾ, ಈ ಪದ್ಯಾರ್ಥವೇ ನಮ್ಮಿಬ್ಬರ ಪ್ರೇಮಕ್ಕೆ ಧ್ರುವ ತಾರೆಯಾಗಿರಲಿ. ನನ್ನ ಮುದ್ದು ತಂಗೀ, ಅದೋ ನೋಡು, ಹುಣ್ಣಿಮೆಯ ರಾತ್ರೀಶ್ವರನು ದಿಗಂತದಲ್ಲಿ ಮೇಲೇರುತ್ತಿದ್ದಾನೆ. ಅದೋ ವನ, ಬೆಟ್ಟ, ಕೆರೆ, ಕೊಳ, ಬಯಲುಗಳೆನ್ನದೆ ಭೂಮಿಯನ್ನೆಲ್ಲಾ ಆತನ ತಂಪಾದ ಕಿರಣಗಳು ಆವರಿಸುತ್ತಿವೆ! ಭೂಮಿಯೆಲ್ಲವೂ ಹೇಗೆ ಮಂಜುಮನಗೆಯಿಂದ ಆನಂದಪಡುತ್ತಿದೆ ನೋಡು! ಆದರೂ ಚಂದ್ರನಿಗೂ ಭೂಮಿಗೂ ಎಷ್ಟು ದೂರವಿದೆ ಯೋಚಿಸಿನೋಡು ಲಲಿತಾ. ಹಾಗೆಯೇ ನೀನು ನನ್ನಿಂದ ಸಹಸ್ರಾರು ಮೈಲಿ ದೂರದಲ್ಲಿದ್ದರೂ ಆತ್ಮದ್ವಾರದಿಂದ ನನ್ನ ಜೀವಿತದ ಸಂಪೂರ್ಣವಾದ ಪ್ರೀತಿಯನ್ನು ನಿನ್ನ ಮೇಲೆ ಇಟ್ಟಿರುತ್ತೇನೆ. ಲಲಿತಾ, ಈ ದೇವಾಯತದಲ್ಲಿರುವ ಚಂದ್ರಧರನೇ ಇದಕ್ಕೆ ಸಾಕ್ಷಿ. ನೀನು ಮಾತ್ರ ನನ್ನ ಆದರ್ಶತಂಗಿಯಂತೆ ನಡೆದುಕೊಂಡು ಶೀಲ ಚಾರಿತ್ರಗಳಲ್ಲಿ ದಮಯಂತಿಸೀತೆಯರಂತೆ ಪೂಜ್ಯಳೆನಿಸಿಕೊಂಡು ನನ್ನ ಪ್ರಥಮ ಗುರುವರ್ಯರಾದ ನಿನ್ನ ಪಿತೃವಿನ

ಆತ್ಮಕ್ಕೆ ಸಂತೋಷವನ್ನುಂಟು ಮಾಡಬೇಕೆಂದು ಪ್ರಾರ್ಥಿಸು ತ್ತೇನೆ. ನಾನಂತೂ ನನ್ನ ವಿದ್ಯಾಭ್ಯಾಸಂಗವನ್ನು ಪೂರೈಸಿ ನನ್ನ ಜೀವಮಾನವೆಲ್ಲವನ್ನೂ ದಾರಿದ್ರ್ಯದ ಸೀಮೆಯಾದ ಈ ನನ್ನ ಹುಟ್ಟು ನಾಡಿನ ಜನತಾಸೇವೆಗೆ ಧಾರೆಯೆರೆದು ಕೊನೆಗೆ ತಪಸ್ಸನ್ನು ಕೈಕೊಂಡು ಇಲ್ಲಿಯೇ ಈ ಚಂದ್ರಮೌಳೀಶ್ವರನ ಸಾನ್ನಿಧ್ಯದಲ್ಲಿ ಆಶ್ರಮವಾಸಿಯಾಗಿ ನೆಲಸೋಣವೆಂದಿದ್ದೇನೆ. ಯಾವುದನ್ನೂ ಅನಂತಪುರದ ನಮ್ಮ ಗುರುದೇವನಲ್ಲಿವಿಚಾರಿಸ ಬೇಕೆಂದಿದ್ದೇನೆ. ನನ್ನ ಆತ್ಮದ ಪ್ರೀತಿಯ ತಂಗೀ, ನೀನು ಮಾತ್ರ ಕರ್ತವ್ಯಪರಳಾಗಿ ಬಾಳನ್ನು ದೇವಾಲಯವೆಂದು ತಿಳಿದು ತ್ರಿಕಾಲಗಳಲ್ಲಿಯೂ ಎಚ್ಚರಳಾಗಿದ್ದುಕೊಂಡು ಪರಿಶು ದ್ಧಾತ್ಮಳಾಗಿ ಬಾಳುತ್ತಾ ಸಾಕಿದ ತಂದೆಯವರಿಗೂ, ಮಗ ಳೆಂದು ಮುದ್ದಿಸಿದ ನನ್ನ ತಾಯಿಗೂ, ಜ್ಞಾನವನ್ನು ಬೋಧಿ ಸಿದ ಆ ಗುರುದೇವನಿಗೂ, ತಂಗಿಯೆಂದು ಪ್ರೀತಿಸುವ ನನಗೂ, ಮತ್ತು ನಿನ್ನ ಕೈಹಿಡಿದು ಬಾಳುವ ಆ ನಮ್ಮ ಪ್ರಿಯ ಜಯ ರಾಮುವಿಗೂ—ಸರ್ವರಿಗೂ ಒಳ್ಳೆಯ ಹೆಸರನ್ನು ತರಬೇಕಾಗಿ ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ.'' ಎಂದನು.

ಚಂದ್ರಯ್ಯನ ಲೋಕೋತ್ತರವಾದ ಮಾತುಗಳನ್ನು ಕೇಳುತಿದ್ದಹಾಗೆಯೇ ಆನಂದ ಕೃತಜ್ಞತೆಗಳ ಕಣ್ಣೀರಿನಲ್ಲಿ ಮಿಂದುಹೋಗಿದ್ದ ಶ್ಯಾಮಯ್ಯನವರು "ಚಂದ್ರಣ್ಣಾ !! ನನ್ನಪ್ಪಾ!!! '' ಎಂದು ತಡವರಿಸುತ್ತಾ ಓಡಿಬಂದು ಚಂದ್ರ ಯ್ಯನನ್ನು ಬಿಗಿಯಾಗಿ ಆಲಿಂಗನ ಮಾಡಿಕೊಂಡು, "ಮೆಚ್ಚಿದೆ ನಪ್ಪಾ! ನಿನ್ನ ಗುಣಶೀಲಗಳು ಜಗತ್ತಿಗೆ ಆದರ್ಶವಾಗಲಿ! ನೀನು ಮಹಾತ್ಮನಪ್ಪಾ! ನಿನ್ನ ಮುಖದ ಸಾತ್ವಿಕ ತೇಜಸ್ಸೇ ಅದನ್ನು ಸಾರಿ ಹೇಳುತ್ತಿದೆ! ಈ ನಿನ್ನ ದೀನ ತಂಗಿಯನ್ನು

ಎಂದೂ ಮರೆಯಬೇಡಪ್ಪಾ." ಎಂದು ನುಡಿದು ತಮ್ಮ ಮಗಳ ಕಡೆಗೆ ತಿರುಗಿದರು. ಲಲಿತೆಯು ತನ್ನ ತಂದೆಯ ಅನಿರೀಕ್ಷಿತವಾದ ಹಠಾತ್ತನೆಯ ದರ್ಶನದಿಂದ ಭಯಪಟ್ಟಿದ್ದಳು. ಆದರೆ ಶ್ಯಾಮಯ್ಯನವರು ತಮ್ಮ ಮಗಳನ್ನು ತಾಯಿಗೋವು ಎಳೆಗರುವನ್ನು ತಬ್ಬಿಕೊಳ್ಳುವಂತೆ ಅಪ್ಪಿಕೊಂಡು, "ಕಂದಾ, ನೋಡಿದೆಯಾ ಚಂದ್ರಯ್ಯನ ಶೀಲವನ್ನು? ಆತನು ನಿನಗೆ ಜ್ಞಾನದೇವತೆಯೆಂದು ಭಾವಿಸು. ಪರಮಾತ್ಮನೆಂದು ಭಾವಿಸು! ಪರಮಾತ್ಮನಲ್ಲಿ ಅನಂತ ಭಕ್ತಿ ಪ್ರೀತಿಗಳಿರಬೇಕೇ ಹೊರತು ಕಾಮಭಾವನೆಗಳಿರಬಾರದು. ನೀವಿಬ್ಬರೂ ಈಗ ಆದರ್ಶರಾದ ಅಣ್ಣತಂಗಿಯರಾಗಿದ್ದೀರಿ. ಇದರಿಂದ ಈಗ ನನಗಾಗಿರುವ ಆನಂದವು ಬದುಕಿರುವ ಯಾವ ಬೇರೆ ಜೀವಿಗೂ ಆಗಿರಲಾರದು! ಈಗಾಗಲೇ ಹೊತ್ತಾಯಿತು. ಬನ್ನಿ, ಸಕಲರಿಗೂ ಕಲ್ಯಾಣವನ್ನು ದಯಪಾಲಿಸುವ ಈ ಕಲ್ಯಾಣೇಶ್ವರನನ್ನು ಪೂಜಿಸಲು ಸಕಲ ಪರಿಕರಗಳನ್ನೂ ತಂದಿದ್ದೇನೆ. ನಾವು ಮೂವರೂ ಪೂಜೆ ಮಾಡಿ ಆತನ ಪ್ರಸಾದವನ್ನು ಪಡೆದು ಭಕ್ತಿಪೂರ್ಣರಾಗಿ ಮನೆಗೆ ಹೋಗೋಣ." ಎಂದರು.

ಮಾರನೆಯ ದಿನ ಮುಂಜಾವದ ಮುಂಜುಗಾಳಿಯು ಬೀಸಿದಾಗ ಮಲಗಿದ್ದ ಚಂದ್ರಯ್ಯನ ಹಣೆ ಸೇದಿಕೊಂಡು ಉರಿದಂತಾಯಿತು! ಇದೇನೆಂದು ಅವನು ಆಶ್ಚರ್ಯದಿಂದ ಅಂಗೈಲಿ ತಡವರಿಸಿಕೊಂಡನು. ತಲೆಯ ಮುಂಗೂದಲೊಳಗೆ ಅರ್ಧ ನಿಂಬೇಕಾಯಿಯ ದಪ್ಪ ಬಾವು ಬಂದಿತ್ತು. ನಿನ್ನೆ ಶಿವವಿಗ್ರಹದ ಮೇಲೆ ದೊಪ್ಪನೆ ಬಿದ್ದಾಗ ಆ ಶಿಲಾಲಿಂಗದ ಅಂಚು ತಗುಲಿತ್ತು. ಆಗ ಆ ಪೆಟ್ಟಿನ ಅರಿವೇ ಚಂದ್ರಯ್ಯನಿ

ಗಾಗಿರಲಿಲ್ಲ. ರಾತ್ರಿ ಯಾರೂ ಅದನ್ನು ಕಾಣುವಂತಿರಲಿಲ್ಲ. ಕನ್ನಡಿಯಲ್ಲಿ ನೋಡಿಕೊಂಡು ಚಂದ್ರಯ್ಯನು ನೋವಿನಿಂದಲೇ ನಕ್ಕನು! ಆ ನೋವಿನಲ್ಲಿ ಶರೀರದ ಯಾತನೆಯಿತ್ತು, ಆದರೆ ಆ ನಗುವಿನಲ್ಲಿ ಧಾರ್ಮಿಕ ತೃಪ್ತಿಯಿತ್ತು! ಪರಮತ್ಯಾಗವೊಂದರ ಆನಂದವಿತ್ತು!

ಸುಮಾರು ಮಧ್ಯಾಹ್ನದ ಹೊತ್ತಿಗೆ ಕಮಾನುಗೂಡಿನ ಸವಾರಿಬಂಡಿಯೊಂದರಲ್ಲಿ ಜಯರಾಮುವು ಅನಂತಪುರದಲ್ಲಿ ಯಾವ ವರ್ತಕಮಹಾಶಯರ ಮನೆಯಲ್ಲಿ ಕೆಲವು ವರ್ಷಗಳಿಂದಲೂ ಸೇವೆಮಾಡಿಕೊಂಡು ಅವರ ಪ್ರೀತಿಸಹಾನುಭೂತಿಗಳನ್ನು ಗಳಿಸಿದ್ದನೋ ಅದೇ ಮನೆಯ ವೃದ್ಧ ಯಜಮಾನರಾದ ಧರ್ಮಭೂಷಣಶ್ರೇಷ್ಠಿಯವರೊಡನೆ ಶ್ಯಾಮಯ್ಯಲಲಿತೆಯರಿದ್ದ ಮನೆಯ ಮುಂದೆ ಬಂದು ಬಂಡಿಯಿಂದಿಳಿದನು. ಅವರಿಗೆ ಅಭೂತಪೂರ್ವವಾದ ಸ್ವಾಗತವನ್ನೀಯಲು ಗೌರಮ್ಮ, ಚಂದ್ರಯ್ಯ, ಶ್ಯಾಮಯ್ಯ ಈ ಮೂವರೂ ಸಿದ್ಧರಾಗಿ ಮುಂದೆ ಬಂದರು. ಗೌರಮ್ಮನವರ ಮನೆಯಂಗಳದಲ್ಲಿ ಚಿನ್ನಯ್ಯ ಗಂಗಮ್ಮನವರೂ ಊರಿನ ಕೆಲವು ಮುತ್ತೈದೆಯರೂ ಬೆರಗಿನಿಂದ ಆಗಂತುಕರನ್ನು ನೋಡುತ್ತಿದ್ದರು. ಗೌರಮ್ಮನವರ ಮನೆಯ ಬಾಗಿಲಲ್ಲಿ ಚಂದ್ರಯ್ಯನ ತಂಗಿ ಶಾರದೆಯು ಕಂಬನಿಗೂಡಿದ ತನ್ನ ಮುಗ್ಧನಯನಗಳಿಂದ ಆಗಂತುಕರನ್ನು ನೋಡುತ್ತಿದ್ದಳು. ಅವಳ ಹಿಂದೆಯೇ ಮರೆಯಾಗಿ ನಿಂತಿದ್ದ ಲಲಿತೆಯು ಬಿಕ್ಕಿ ಬಿಕ್ಕಿ ಅಳುತ್ತಿದ್ದಳು! ಚಂದ್ರಯ್ಯನು ಮಾತ್ರ ಜಯರಾಮುವನ್ನು ಸಮೀಪಿಸಿ "ಬಾ ನನ್ನ ಪ್ರಿಯ ಜಯರಾಮು. ನೀನು ನನ್ನಾತ್ಮಕ್ಕೆ ಸಮಾನವಪ್ಪಾ." ಎಂದು ಹೇಳುತ್ತಾ ಜಯರಾಮುವನ್ನು

ತನ್ನ ಬಾಹುಗಳಲ್ಲಪ್ಪಿಕೊಂಡನು! ಉನ್ನತಭವ್ಯಶರೀರಿಗಳೂ ಸ್ಥೂಲಕಾಯರೂ ಆಜಾನುಬಾಹುಗಳೂ ವೃದ್ಧಮಹಾಶಯರೂ ಆದ ಧರ್ಮಭೂಷಣಶ್ರೇಷ್ಠಿಯವರ ಪ್ರಕಾಶಮಾನವಾದ ಕಣ್ಣುಗಳಲ್ಲಿ ವಿಸ್ಮಯವು ಮೂಡಿತು!

ಓಂ ಶಾಂತಿಃ



## ಮುಂದೆ ಬರಲಿರುವ ಈ ಲೇಖಕನ ಕೃತಿಗಳು :

ಶಿಲ್ಪಿ ಕನಕ ಮತ್ತು ಇತರ ಕಥೆಗಳು.

ಭಾಷಾಂತರಿತ ಮಹಾಕಥೆಗಳು.

ಪ್ರೇಮಸಿದ್ಧಿ (ಸುಮಾರು 350 ಪುಟಗಳ ಕಾದಂಬರಿ).

ಬಾಳವಿಕಸನ ಲಕ್ಷ್ಮಿ (ಪ್ರೇಮಗೀತೆಗಳು).

ಯಜ್ಞಯಾನ (ಭಕ್ತಿಗೀತೆಗಳು).

ಕಲಾಕನ್ಯೆ (ಕವನ ಸಂಗ್ರಹ).

